ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೮-೦
೬ ತಿಂಗಳಿಗೆ ,, ೩-೮-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
SEPT. 30
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ.

[ ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ ]

Editor : H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೩೦ — ೯ — ೧೯೪೬ [ ಸಂಚಿಕೆ ೨೫

# ಹಿಂದುಸ್ತಾನದ ಆಹಾರ ಪೂರೈಕೆಯ ಸಮಸ್ಯೆಗಳು

## ಮುಂದಿನ ಎರಡು ಮೂರು ತಿಂಗಳಲ್ಲಿ ಕಂಟಕ ಪರಿಸ್ಥಿತಿ— ಹೊರಗಿನ ಸಹಾಯ ಸಾತಿಲ್ಲ — ಒಳಗೆ ಬೆಳೆ ಕೆಟ್ಟಿವೆ— ಎಲ್ಲರೂ ಸೇರಿ ಜಗ್ಗಿದರೆ ವಿಪತ್ತಿನಿಂದ ಪಾಗಾಗಬಹುದು

### ಬಾಬೂ ರಾಜೇಂದ್ರ ಪ್ರಸಾದರ ಆಕಾಶವಾಣಿ ಭಾಷಣ

ಹಿಂದುಸ್ತಾನದ ಆಹಾರ ಪರಿಸ್ಥಿತಿಯನ್ನು ಕುರಿತು ಆಹಾರ ಮಂತ್ರಿ ಡಾ. ರಾಜೇಂದ್ರ ಪ್ರಸಾದರು ಮೊನ್ನೆ ಸೋಮವಾರ ಒಂದು ಆಕಾಶವಾಣಿ ಭಾಷಣವನ್ನು ಮಾಡಿ ಎಲ್ಲ ವಿಷಯವನ್ನೂ ಜನತೆಯ ಮುಂದೆ ತೆರೆದಿಟ್ಟಿದ್ದಾರೆ. ಜನರು ಸರಕಾರದೊಡನೆ ಸಹಕರಿಸಿ ಸಾಧ್ಯವಿದ್ದಷ್ಟು ಮಿತವ್ಯಯ ಮಾಡಲು ಮತ್ತು ಉತ್ಪಾದನೆಯನ್ನು ಹೆಚ್ಚಿಸಲು ಪ್ರಯತ್ನಿಸಿದರೆ ಮಾತ್ರ ನಾವು ಈ ಕಂಟಕದಿಂದ ಪಾರಾಗಬಹುದು ಎಂಬದಾಗಿ ಡಾ. ಪ್ರಸಾದರು ಹೇಳಿರುವರು. ಜನತೆ ಅವಶ್ಯ ಲಕ್ಷಿಸಬೇಕಾದ ಸಂಗತಿಯಿದು. ಅವರ ಭಾಷಣವನ್ನು ಕೆಳಗೆ ಕೊಟ್ಟಿದೆ.

ನಾನು ಆಹಾರ ಖಾತೆಯ ಆಡಳಿತೆಯನ್ನು ವಹಿಸಿಕೊಂಡು ಬರಿ ಮೂರು ವಾರಗಳಾದವು. ಆದುದರಿಂದ ದೇಶದ ಸದ್ಯದ ಆಹಾರ ಸಮಸ್ಯೆಯನ್ನೂ ಆಹಾರ ಆಡಳಿತೆಯನ್ನೂ ಕುರಿತು ವಿವರಗಳನ್ನು ನಾನು ಕೊಡದಿದ್ದರೆ ನನ್ನ ಶ್ರೋತೃಗಳು ನನ್ನನ್ನು ದೂರಲಾರರೆಂದು ಆಶಿಸುತ್ತೇನೆ. ಆದರೆ ಪರಿಸ್ಥಿತಿಯ ಸ್ಥೂಲ ವಿದ್ಯಮಾನಗಳು ಸರ್ವವಿದಿತವಾಗಿವೆ. ಯುದ್ಧಪೂರ್ವದಲ್ಲಿ ಕೂಡ ತನ್ನ ಆಹಾರ ಆವಶ್ಯಕತೆಗಳನ್ನು ತುಂಬಿಕೊಳ್ಳಲು ೧೦ ಲಕ್ಷ ಟನ್, ಕೆಲವೊಮ್ಮೆ ೨೦ ಲಕ್ಷ ಟನ್ ಆಹಾರ ಧಾನ್ಯಗಳನ್ನು ಮುಖ್ಯವಾಗಿ ಬ್ರಹ್ಮದೇಶದಿಂದ, ಹಿಂದುಸ್ತಾನವು ತರಿಸಿಕೊಳ್ಳುತ್ತಿತ್ತು. ಈ ವರ್ಷ, ಅನಾವೃಷ್ಟಿಯ ಕಾರಣದಿಂದ, ಮುಂಗಾರಿ ಹಿಂಗಾರಿ ಬೆಳೆಗಳೆರಡೂ ಬಹಳ ಹಾಳಾಗಿ ಹೋಗುವ ದುರ್ದೈವ ಹಿಂದುಸ್ತಾನಕ್ಕೆ ಗಂಟುಬಿತ್ತು. ಇದರಿಂದ ಮಧ್ಯ ಮತ್ತು ದಕ್ಷಿಣ ಹಿಂದುಸ್ತಾನದಲ್ಲಿ ಸುಮಾರು ೩೦ ಲಕ್ಷ ಟನ್ ಅಕ್ಕಿ ಮತ್ತು ಇತರ ದವಸಗಳೂ ಉತ್ತರ ಭಾರತದಲ್ಲಿ ೪೦ ಲಕ್ಷ ಟನ್ನಷ್ಟು ಹಿಂಗಾರಿ ಪೈರೂ ನಾಶವಾಗಿ ಹೋಯಿತು. ಇಂಥ ದುರ್ದೈವ ೫೦ ವರ್ಷಗಳಲ್ಲಿ ಒಮ್ಮೆಯೋ ಎರಡು ಸಲವೊ ಮಾತ್ರ ದೇಶವನ್ನು ಎದುರಿಸುತಿರುತ್ತದೆ.

ಈ ಅನಾಹುತವನ್ನು ಎದುರಿಸಲು ಮೂರು ಹಾದಿಗಳಿವೆ. ಮುಖ್ಯ ಬೆಳೆಗಳ ನಡುವಿನ ಸಮಯದಲ್ಲಿ ಬೆಳೆಸಬಹುದಾದ ಪೈರುಗಳ ಉತ್ಪಾದನೆಯನ್ನು ಹೆಚ್ಚಿಸುವದು ಒಂದನೆಯ ಹಾದಿ, ಹೊರಗಿನಿಂದ ಸಹಾಯವನ್ನು ದೊರಕಿಸಿಕೊಳ್ಳುವದು ಎರಡನೆಯದು ಮತ್ತು ಕೊರತೆಯ ಅಂಶವನ್ನು ದೇಶದಲ್ಲೆಲ್ಲ ಆದಷ್ಟು ಸಮಾನವಾಗಿ ಹಂಚುವದು ಮೂರನೆಯದು.

### ಧಾನ್ಯ ಆಯಾತ ಪ್ರಯತ್ನದಲ್ಲಿ ನಿರಾಶೆ

ಹುಟ್ಟುವಳಿಯನ್ನು ಹೆಚ್ಚಿಸುವ ಕೆಲಸ ಒಕ್ಕಲತನ ಖಾತೆಗೆ ಸೇರಿದ್ದು. ಈ ವಿಷಯದಲ್ಲಿ, ಅಲ್ಪಾವಧಿಯ ಪೈರುಗಳನ್ನು ಬೆಳೆಸಲು ಕೇಂದ್ರ ಪ್ರಾಂತಿಕ ಸರಕಾರಗಳೆರಡೂ ಉತ್ತೇಜನ ಕೊಟ್ಟಿವೆಯೆಂದರೆ ಸಾಕು. ರೈತರಿಗೆ ಸಹಾಯಧನವನ್ನು ಕೊಟ್ಟದ್ದಲ್ಲದೆ, ಕಂದಾಯದಲ್ಲಿ ರಿಯಾಯತಿ, ನೀರಿನ ಪೂರೈಕೆ, ಪುಕ್ಕಟೆ ಗೊಬ್ಬರ ಇವುಗಳ ರೂಪದಲ್ಲಿಯೂ ಅವರಿಗೆ ಸೌಲಭ್ಯಗಳನ್ನು ತೋರಿಸಲಾಗಿದೆ. ಹೀಗಿದ್ದರೂ ಈ ಪೂರೈಕೆ ಕಾಳುಗಳು ಕೊರತೆಯನ್ನು ಅಲ್ಲಲ್ಲಿ ಎಲ್ಲೋ ಸ್ವಲ್ಪ ಮಟ್ಟಿಗೆ ನೀಗಿಸಬಹುದಾಗಿತ್ತು ಹೊರತು ಅದನ್ನು ನಿಜವಾಗಿ ಪರಿಹರಿಸಬಹುದೆಂಬ ನಿರೀಕ್ಷೆಯನ್ನು ಇಟ್ಟುಕೊಂಡಿದ್ದಿಲ್ಲ.

ಹೊರಗಿನಿಂದ ಸಾಕಷ್ಟು ಆಹಾರವನ್ನು ಆಯಾತ ಮಾಡಿಕೊಳ್ಳುವ ಪ್ರಯತ್ನಗಳಲ್ಲಿ ನಾವು ಹಲವಾರು ಬಾರಿ ನಿರಾಶೆಗೊಳಗಾಗುವ ಅವಸ್ಥೆಯುಂಟಾಯಿತು. ಆಹಾರದ ಕೊರತೆಯಿಂದ ಗಾಬರಿಗೊಂಡಿರುವ ಜಗತ್ತಿನಲ್ಲಿ ಇದು ಅನಿವಾರ್ಯವೇ ಆಗಿತ್ತು. ಹಿಂದೀ ಶಿಷ್ಟಮಂಡಲ ವಾಶಿಂಗ್‌ಟನ್ನಿಗೆ ಹೋದ ಸಮಯದಲ್ಲಿ ಜಗತ್ತಿನ ಗೋದಿ ಬೇಡಿಕೆ ೨ ಕೋಟಿ ಟನ್ ಇದ್ದರೆ ಪೂರೈಕೆ ಬರಿ ೧ ಕೋಟಿ ೨೦ ಲಕ್ಷ ಟನ್ ಇತ್ತು. ಅಕ್ಕಿಯ ಬೇಡಿಕೆಯಾದರೂ ಎರಡನೆಯ ತ್ರಿಮಾಸಾವಧಿಗಾಗಿ (ಎಪ್ರಿಲ—ಜೂನ) ೨೦ಲಕ್ಷ ಟನ್‌ಗಳಷ್ಟು ಇದ್ದಾಗ ಪೂರೈಕೆ ಮಾತ್ರ ೫,೭೩,೦೦೦ ಟನ್‌ಗಿಂತ ಹೆಚ್ಚಿರಲಿಲ್ಲ. ಈ ಕಾರಣದಿಂದ ತನ್ನ ಕೊರತೆಯನ್ನು ಬಾಯಿಗೂಡಿಸಲು ಸಾಲುವಷ್ಟು ಆಹಾರದ ಪ್ರಮಾಣವನ್ನು ದೊರಕಿಸುವದು ಹಿಂದುಸ್ತಾನಕ್ಕೆ ಸಾಧ್ಯವಾಗಲೇ ಇಲ್ಲ. ಗೋದಿಯ ಅಥವಾ ಅದಕ್ಕೆ ಪ್ರತಿಯಾಗಿ ಗೋವಿನಜೋಳ ಮೊದಲಾದ ಧಾನ್ಯಗಳ ನಿರ್ದಿಷ್ಟ ಪೂರೈಕೆಯನ್ನು ಸಂಪಾದಿಸುವದು ಕೂಡ ಸಾಧ್ಯವಾಗಲಿಲ್ಲ. ಆಂತರ್‌ರಾಷ್ಟ್ರೀಯ ಅವಸರದಆಹಾರಸಮಿತಿ ದೊರಕಿಸಿದಷ್ಟು ಪೂರೈಕೆಯನ್ನು ತಿಂಗಳಿಂದ ತಿಂಗಳಿಗೆ ಹಂಚುತ್ತ ಹೋಗಬೇಕಾಯಿತು. ಎರಡನೆ ತ್ರಿಮಾಸಾವಧಿಗೆ ೫ ಲಕ್ಷ ಟನ್ ಅಕ್ಕಿಯನ್ನು ನಾವು ಬೇಡಿದ್ದರೆ ನಮಗೆ ದೊರೆತದ್ದು ೧೩೬,೦೦೦ ಟನ್. ವರ್ಷದ ಉತ್ತರಾರ್ಧಕ್ಕಾಗಿ ನಾವು ೭ ಲಕ್ಷ ಟನ್ ಅಕ್ಕಿ ಬೇಡಿದ್ದರಲ್ಲಿ ನಮಗೆ ದೊರೆತಿದ್ದು ೨,೭೦,೦೦೦ ಟನ್ ಮಾತ್ರ. ಒಟ್ಟು ಕನಿಷ್ಠ ೪೦ ಲಕ್ಷ ಟನ್ ಆಹಾರ ಧಾನ್ಯವಾದರೂ ಬರಬೇಕೆಂಬ ಹಿಂದುಸ್ತಾನದ ಬೇಡಿಕೆಯಲ್ಲಿ ಈ ವರೆಗೆ ನಮ್ಮಲ್ಲಿಗೆ ಬಂದು ಸೇರಿರುವದು ಕೇವಲ ೧೩॥ ಲಕ್ಷ ಟನ್. ಅದರಲ್ಲಿ ಅಕ್ಕಿಯಿರುವದು ಬರಿ ೧,೭[illegible]೦೦ ಟನ್ ಮಾತ್ರ.

### ಧಾನ್ಯ ಹಂಚಿಕೆಯ ಸಂಕಟ

ಮೊನ್ನೆ ಎಪ್ರಿಲದಿಂದ, ಹಿಂದುಸ್ತಾನದಲ್ಲಿಯೇ ದೊರಕಿಸಿಕೊಳ್ಳಬಹುದಾದ ಸಂಗ್ರಹವನ್ನೂ ವಿದೇಶದಿಂದ ಬಂದು ಸೇರಿದುದನ್ನೂ ಕೊರತೆ ಪ್ರಾಂತಗಳಿಗೂ ಸಂಸ್ಥಾನಗಳಿಗೂ ಹಂಚಿ ಪ್ರತಿ ತಿಂಗಳ ಕೊನೆಯಲ್ಲಿ ಅಲ್ಲಲ್ಲಿ ಮುಂದಿನ ಆರು ವಾರಗಳ ಪೂರೈಕೆ ಉಳಿದಿರುವಂತೆ ನೋಡಿಕೊಳ್ಳಬೇಕಾದರೆ ಆಹಾರ ಖಾತೆಗೆ ಸಾಕುಬೇಕಾಯಿತು. ಜನತೆಯೂ ಪ್ರಾಂತಿಕ ಮತ್ತು ಸಂಸ್ಥಾನ ಸರಕಾರಗಳೂ ತಮ್ಮಲ್ಲಿರಬಹುದಾದ ಆಂತರಿಕ ಉಳಿತಾಯಗಳನ್ನು ಕೂಡಹಾಕಲು ಮತ್ತು ಅಂತರಿಕ ಆಹಾರ ವೆಚ್ಚದಲ್ಲಿ ಮಿತವ್ಯಯ ಮಾಡಲು ಹೆಣಗಿದ್ದರಿಂದಲೇ ಈ ವರೆಗೆ ಪರಿಸ್ಥಿತಿ ಸಂಪೂರ್ಣ ಅಂಕೆ ತಪ್ಪಿಹೋಗದೆ ಉಳಿದಿದೆ. ಇಲ್ಲಿ ನಾನು ಯುಕ್ತಪ್ರಾಂತ, ಮದ್ರಾಸ, ಮುಂಬಯಿ ಪ್ರಾಂತಿಕ ಸರಕಾರಗಳಿಗೆ ನನ್ನ ವೈಯಕ್ತಿಕ ಅಭಿನಂದನೆಗಳನ್ನು ಅರ್ಪಿಸಬೇಕಾಗಿದೆ. ಹೊಸ ಮಂತ್ರಿಮಂಡಲಗಳು ಅಧಿಕಾರಕ್ಕೆ ಬಂದ ಅಲ್ಪಕಾಲದಲ್ಲಿಯೆ, ಜನಪ್ರಿಯ ಸರಕಾರಗಳು ಇಂಥ ಇಕ್ಕಟ್ಟಿನಲ್ಲಿ ಜನಾಭಿಪ್ರಾಯವನ್ನು ರೂಪಿಸಿ ಸಾರ್ವಜನಿಕ ಸಹಕಾರವನ್ನು ಹೇಗೆ ಕೈಗೂಡಿಸಿಕೊಳ್ಳಬಲ್ಲವೆಂಬುದನ್ನು ತೋರಿಸಿಕೊಟ್ಟಿವೆ. ಸಪ್ಟೆಂಬರ ತಿಂಗಳ ಒಂದನೆ ತಾರೀಖಿನ ದಿನ, ಕೊರತೆ ಪ್ರಾಂತಗಳಲ್ಲಿಯೂ ಸಂಸ್ಥಾನಗಳಲ್ಲಿಯೂ ಒಟ್ಟಿನ ಮೇಲೆ ಆರು ವಾರಗಳ ಶೇಖರಣೆಯಿತ್ತು. ಹೊರಗಿನಿಂದ ಹೆಚ್ಚು ಹೆಚ್ಚು ಆಹಾರ ಹೊರಟುಬರುವ ನಿರೀಕ್ಷೆಯಿರುವದರಿಂದ ನವಂಬರ ಅಂತ್ಯದವರೆಗಾದರೂ ಹೇಗಾದರೂ ಮಾಡಿ ಸಾಗಿಸಿಕೊಂಡು ಹೋಗಬಹುದೆಂಬ ಆಸೆಯಿತ್ತು. ಆಗ ಹೊಸ ಮುಂಗಾರಿ ಪೈರು ಸುಗ್ಗಿಯಾಗತೊಡಗುವದು. ಆದರೆ ಈಚೆಗೆ ಪರಿಸ್ಥಿತಿ ಮತ್ತಷ್ಟು ಕೆಟ್ಟದೆ. ಅಮೇರಿಕೆಯಲ್ಲಿ ಪ್ರಾರಂಭವಾದ ನಾವಿಕರ ಸಂಪು ಒಂದು ದೊಡ್ಡ ದುರ್ಘಟನೆ. ಅದು ನಿಂತಿದೆಯೆಂಬ ಸುದ್ದಿ ನಿಜವಾಗಿದ್ದರೆ ಸಹ ಅನೇಕ ದಿನಗಳು ಈಗಾಗಲೆ ವ್ಯರ್ಥ ಕಳೆದುಹೋಗಿವೆ. ಇದರಿಂದ ಅಕ್ಟೋಬರದಲ್ಲಿ ಬಂದು ಸೇರಬೇಕಾಗಿರುವ ಧಾನ್ಯ ನಂಬಿದ್ದಕ್ಕಿಂತ ಕನಿಷ್ಠ ೧,೦೦,೦೦೦ ಟನ್ ಆದರೂ ಕಡಿಮೆಯಾಗುವದು. ಅರ್ಜೆಂಟೀನದಿಂದ ಗೋವಿನಜೋಳ ಮೊದಲಾದ ಧಾನ್ಯಗಳು ಹೆಚ್ಚಿನ ಪ್ರಮಾಣದಲ್ಲಿ ಆಯಾತವಾಗಬಹುದೆಂಬ ಆಶೆಯನ್ನು ಹಿಡಿದಿದ್ದೆವು. ಇದಕ್ಕಾಗಿ ದಿವಾಣ ಚಮನಲಾಲರ ಮುಂದಾಳ್ತನದಲ್ಲಿ ಒಂದು ಶಿಷ್ಟಮಂಡಲವನ್ನು ಅಲ್ಲಿಗೆ ಕಳಿಸಲಾಗಿತ್ತು. ಈ ಶಿಷ್ಟಮಂಡಲ ಎಷ್ಟು ಪ್ರಯತ್ನ ಮಾಡಿದರೂ ಅಲ್ಲಿ ನಾವು ಕೊಂಡ ಧಾನ್ಯಗಳಿಗೆಲ್ಲ ನಿರ್ಯಾತದ ಅಪ್ಪಣೆ ಚೀಟಿಸಿಗಲಿಲ್ಲ. ಇದರಿಂದ ಅಕ್ಟೋಬರದಲ್ಲಿ ಬರುವದೆಂದು ನಾವು ಲೆಕ್ಕ ಹಾಕಿದ್ದಕ್ಕಿಂತ ನಿಜವಾಗಿ ೬೮ ಸಾವಿರ ಟನ್ನಿನಷ್ಟಾದರೂ ಕಡಿಮೆ ಧಾನ್ಯ ಬರುವದು. ೨೪ ಸಾವಿರ ಟನ್ ಗೋದಿಯನ್ನು ಹೊತ್ತ ಮೂರು ಹಡಗುಗಳನ್ನು ಇತ್ತ ಹೊರಳಿಸುವದಾಗಿ ಯುಕ್ತರಾಷ್ಟ್ರ ಪರಿಹಾರ ಮಂಡಲದವರು ಕೆಲ ದಿನಗಳ ಹಿಂದೆ ಪ್ರಕಟಿಸಿದ್ದಾರೆ. ಇದರಿಂದ ನಮಗೆ ಬಹಳ ಉಪಕಾರವಾಗುತಿತ್ತು. ಆದರೆ ನಾವಿಕರ ಸಂಪು ಈ ಹಡಗುಗಳನ್ನು ಹೇರುವ ಕೆಲಸವನ್ನೂ ತಡೆಯುವದು. ಇನ್ನು ಬ್ರೇಝಿಲದಿಂದ ಬರಬೇಕಾದ ಅಕ್ಕಿಯ ಪೂರೈಕೆಯೂ ವಿಲಂಬಿತವಾಗಿದೆ. ದೂರ ಪ್ರಾಚ್ಯದಲ್ಲಿಯೂ ಪೂರೈಕೆಯ ಪರಿಸ್ಥಿತಿ ಕೆಟ್ಟದೆ. ಅಂತರ್‌ರಾಷ್ಟ್ರೀಯ ಅವಸರ ಆಹಾರ ಸಮಿತಿಯವರು ನಮಗೆ ಬ್ರಹ್ಮ ಮತ್ತು ಸಯಾಮ ದೇಶಗಳಿಂದ ೨,೯೭,೫೦೦ ಟನ್ ಅಕ್ಕಿಯನ್ನು ಮೀಸಲಿಟ್ಟಿದ್ದರು. ಈ ಮೀಸಲಿನಲ್ಲಿ ೧,೩೭,೦೦೦ ಟನ್‌ಗಿಂತ ಹೆಚ್ಚು ಕೈಸೇರುವ ಸಂಭವವಿಲ್ಲೆಂದು ಈಗ ನಾವು ಲೆಕ್ಕ ಹಾಕಿದ್ದೇವೆ. ಇದರಿಂದ ೭೦ ಸಾವಿರ ಟನ್ ಕಡಿತವಾದಂತಾಯಿತು. ಸಯಾಮದಿಂದ ಬರಬೇಕಾದ ಅಕ್ಕಿಯಲ್ಲಿ ಕಡಿತವಾಗಲು ಮುಖ್ಯವಾಗಿ ಅಲ್ಲಿಯ ಅಂತರಿಕ ತೊಂದರೆಗಳೂ ಸಾರಿಗೆಯ ಸೌಕರ್ಯಗಳು ಸಾಕಷ್ಟು ಇಲ್ಲದಿರುವದೂ ಕಾರಣವಾಗಿವೆ. ಇವುಗಳಲ್ಲಿ ಕೆಲವು ತೊಡಕುಗಳನ್ನು ಪರಿಹರಿಸಲು ನಾವು ಪ್ರಯತ್ನಿಸಿದ್ದೇವೆ. ನಾನು ಅಧಿಕಾರ ಸ್ವೀಕಾರಮಾಡಿದ ದಿನ, ಹಿಂದುಸ್ತಾನದಿಂದ ೫ ಕೋಟಿ ರೂಪಾಯಿಗಳ ಸಾಲ ಪಡೆಯುವ ಒಪ್ಪಂದಕ್ಕೆ ಅಂಕಿತ ಹಾಕಲು ಬಂದಿದ್ದ ಸಯಾಮೀ ಶಿಷ್ಟಮಂಡಲದವರೊಡನೆ ಮಾತಾಡಿ ಹಿಂದುಸ್ತಾನಕ್ಕೆ ಸಯಾಮದಿಂದಾಗಬೇಕಾದ ನಿರ್ಯಾತಗಳನ್ನು ತ್ವರಿತಗೊಳಿಸುವದರ ಅತ್ಯಂತ ಅವಶ್ಯಕತೆಯನ್ನು ಅವರ ಮನಸ್ಸಿಗೆ ಬಿಂಬಿಸುವ ಯೋಗ ನನಗೆ ದೊರಕಿತ್ತು.

೩ನೇ ಪುಟಕ್ಕೆ

# ರಾಜೇಂದ್ರ ಪ್ರಸಾದರ ಆಕಾಶವಾಣಿ ಭಾಷಣ

( ೧ ನೇ ಪುಟದಿಂದ ಮುಂದರಿದುದು )

## ದೂರ ಪೂರ್ವದ ತೊಡಕಗಳು

ಬ್ರಹ್ಮದೇಶದ ಪರಿಸ್ಥಿತಿ ಕೆಲ ತಿಂಗಳ ಹಿಂದೆ ಲೆಕ್ಕ ಹಾಕಿದುದಕ್ಕಿಂತಲೂ ಉತ್ತಮವಾಗಿದೆ. ಆದರೆ ಸಯಾಮು, ಬ್ರಹ್ಮದೇಶ, ಇಂಡೋಚೀನ ಇವು ಮೂರನ್ನೂ ಅಂತರ್ರಾಷ್ಟ್ರೀಯ ಆಹಾರ ಮಂಡಲ ಒಂದೇ ರಾಶಿಯಾಗಿ ಪರಿಗಣಿಸಿರುವದರಿಂದ ಬ್ರಹ್ಮದೇಶದಿಂದ ದೊರಕುವ ಹೆಚ್ಚಿನ ಪೂರೈಕೆ ನಮಗೆ ಸಿಗುವದಿಲ್ಲ. ನಾವು ಆಶೆಯಿಂದ ನೋಡುತ್ತಿದ್ದ ಇನ್ನೊಂದು ಸ್ಥಳವಿತ್ತು. ಅದೆಂದರೆ, ಇಂಡೋನೇಶಿಯನ್ ಪ್ರಜಾರಾಜ್ಯದವರು ೫ ಲಕ್ಷ ಟನ್ ಅಕ್ಕಿ ಅಥವಾ ೭ ಲಕ್ಷ ಟನ್ ಭತ್ತವನ್ನು ನಮಗೆ ಕೊಡಮಾಡಿದು ಇದರ ಬಗ್ಗೆ ಇಂಡೊನೇಶಿಯನ್ ಪ್ರಜಾರಾಜ್ಯ ಹಾಗು ಡಚ್ ಈಸ್ಟ್ ಇಂಡೀಸ ಸರಕಾರಗಳೊಡನೆ ಔಪಚಾರಿಕ ಒಪ್ಪಂದವನ್ನು ಕಳೆದ ತಿಂಗಳಲ್ಲಿ ಮಾಡಿಕೊಳ್ಳಲಾಯಿತು. ಅಲ್ಲಿರುವ ಮುಖ್ಯ ಸಮಸ್ಯೆಯೆಂದರೆ ಒಳನಾಡಿನಿಂದ ಅಕ್ಕಿಯನ್ನು ರೇಲುದಾರಿಯಿರುವಲ್ಲಿಗೆ ಮತ್ತು ಬಂದರಗಳಿಗೆ ಸಾಗಿಸುವದು, ಇದಕ್ಕೆ ಕಲ್ಲಿದ್ದಲಿ ಮೋಟಾರ ಟ್ರಕ್ಕುಗಳು ಬೇಕು. ಹಿಂದುಸ್ತಾನ ಇದನ್ನು ಒದಗಿಸಬಲ್ಲದಾಗಿತ್ತು. ಆದರೆ ಕೆಲವು ತೊಡಕುಗಳು ತಲೆಯೆತ್ತಿವೆಯಾದುದರಿಂದ ಈ ಉದಾರವಾದ ಕೊಡುಗೆಯ ಪೂರ್ಣಲಾಭವನ್ನು ನಾವು ಪಡೆಯಲಾರದವರಾಗಿದ್ದೇವೆ. ಆದರಿಂದ ಅಲ್ಲಿಂದ ಈ ವರೆಗೆ ಬಂದಿರುವ ಪೂರೈಕೆ ಗಮನಾರ್ಹವೆನಿಸುವಷ್ಟಿಲ್ಲ. ನಮ್ಮ ಮುಂದಿರುವ ಕಠಿಣ ತಿಂಗಳುಗಳಲ್ಲಾದರೂ ಆ ಕಡೆಯಿಂದ ವಿಶೇಷ-ಸಹಾಯ ಒದಗದಿರಬಹುದು.

ನಮ್ಮ ದೇಶದಲ್ಲಿ ಬೆಳೆ ಕೆಟ್ಟುಹೋಗಿದೆ, ಹೊರಗಿನಿಂದ ನಮಗೆ ಮೀಸಲು ದೊರೆತುದು ನಮಗೆ ಸಾಲದು. ಮಾತ್ರವಲ್ಲ ಆ ಮೀಸಲೂ ಪೂರ್ಣ ಇಲ್ಲಿಗೆ ಬಂದು ಸೇರಿಲ್ಲ. ಸಯಾಮು ಮತ್ತು ಜಾವಾಗಳಲ್ಲಿ ಸಾರಿಗೆಯ ತೊಡಕುಗಳಿವೆ. ಆರ್ಗೆಂಟೀನಾದಿಂದ ನಿರೀಕ್ಷಿಸಿದ ಆಯಾತ ಕೈತಪ್ಪಿ ಹೋಗಿದೆ. ಈ ಪ್ರಕಾರ ಹಿಂದುಸ್ತಾನ ಮುಂದಿನ ಎರಡು ಮೂರು ತಿಂಗಳಲ್ಲಿ ಗಂಭೀರವಾದ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬಂದಿದೆ. ಹೊರಗಿನ ಆಯಾತದಿಂದ ಇದನ್ನು ಎಲ್ಲೋ ಅಲ್ಪಸ್ವಲ್ಪ ಮಟ್ಟಿಗೆ ಎದುರಿಸಬಹುದು. ಈ ವರೆಗೆ ನಮಗೆ ಸಹಾಯ ಮಾಡಿದ ರಾಜ್ಯಗಳಿಗೆ ನಾವು ಕೃತಜ್ಞರಾಗಿರಬೇಕಾದರೂ ತಮ್ಮ ಕೈಲಾದಷ್ಟು ಸಹಾಯವನ್ನು ಅವು ನಮಗೆ ಮಾಡುತ್ತ ಹೋಗಬೇಕೆಂದು ಪ್ರಾರ್ಥಿಸುವೆವಾದರೂ ಪರಿಸ್ಥಿತಿ ಹದಗೆಡದಂತೆ ತಡೆಯಬೇಕಾದರೆ ನಾವು ನಮ್ಮನ್ನೇ ಅವಲಂಬಿಸುವದು ಅವಶ್ಯವೆಂದು ನಾವು ಚನ್ನಾಗಿ ಅರಿತುಕೊಳ್ಳಬೇಕು. ಇದನ್ನು ನಾವು ಮಾಡಬಲ್ಲೆವು, ಮಾಡಲೇಬೇಕು. ನಾವು ಬೆಳೆಯಬಹುದಾದುದನ್ನೆಲ್ಲ ಬೆಳೆಯಬಹುದಾದಲ್ಲೆಲ್ಲ ಬೆಳೆಯೋಣ. ಧಾನ್ಯಗಳಲ್ಲದೆ ಸ್ವಲ್ಪಾವಧಿಯಲ್ಲಿಯೇ ಬೆಳೆಸಬಹುದಾದ ಎಷ್ಟೋ ಕಾಯಿಪಲ್ಲೆ, ಗಡ್ಡೆಗೆಣಸು, ಫಲವಸ್ತುಗಳಿವೆ. ಅವುಗಳನ್ನು ಬೆಳೆಸಲು ಬೇಕಾದುದು ಸ್ವಲ್ಪ ಆಸ್ಥೆ, ಪೂರ್ವಚಿಂತನೆ ಮತ್ತು ಶ್ರಮ ಇಷ್ಟೆ. ನಮ್ಮ ಒಕ್ಕಲಿಗರು ಒಳ್ಳೆ ಪ್ರಸಂಗಾವಧಾನಿಗಳೆಂದು ನಮಗೆ ಗೊತ್ತಿದೆ. ಕೆಲವು ಪ್ರದೇಶಗಳು ಬೇರೆಯವುಗಳಿಗಿಂತ ಸ್ವಲ್ಪ ಒಳ್ಳೆ ಸ್ಥಿತಿಯಲ್ಲಿವೆ. ಆ ಪ್ರದೇಶಗಳಲ್ಲಿರುವವರು ಕಷ್ಟದಲ್ಲಿರುವವರಿಗೆ ಸಾಧ್ಯವಿದ್ದಷ್ಟು ಸಹಾಯ ಮಾಡಬೇಕು. ಒಟ್ಟಿನ ಮೇಲೆ ಇಡಿ ದೇಶವೇ ತ್ಯಾಗ ಮಾಡಲು ಸಿದ್ಧವಾಗಬೇಕು. ತೊಂದರೆ ವಿಶೇಷವಾಗಿರುವದು ಅಕ್ಕಿ ಉಣ್ಣುವ ಪ್ರದೇಶಗಳಲ್ಲಿ. ಅಕ್ಕಿಯಿಲ್ಲದೆ ಹೇಗಾದರೂ ಸಾಗಿಸಬಲ್ಲ ಭಾಗಗಳ ಜನರು ತಮಗೆ ಸ್ವಲ್ಪ ತೊಂದರೆಯಾದರೂ ಲೆಕ್ಕಿಸದೆ ಗೋದಿ ಮತ್ತು ಅದರ ಬದಲು ಧಾನ್ಯಗಳಿಂದಲೆ ತೃಪ್ತರಾಗಿ ಸಾಧ್ಯವಿದ್ದಷ್ಟು ಅಕ್ಕಿಯನ್ನು ಬೇರೆಯವರಿಗಾಗಿ ಬಿಡಬೇಕೆಂದು ಪ್ರಾರ್ಥಿಸುತ್ತೇನೆ. ಇನ್ನು ಅಕ್ಕಿಯನ್ನು ಬಳಸುವ ಪ್ರದೇಶಗಳು ಗೋದಿ ಮತ್ತು ಬದಲುಧಾನ್ಯಗಳನ್ನು ಸ್ವೀಕರಿಸಿ ಅವುಗಳಿಗೆ ಹೊಂದಿಕೊಂಡು ಅಕ್ಕಿಯ ವೆಚ್ಚವನ್ನು ಕಡಿಮೆಮಾಡಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ. ಖಂಡಿತವಾಗಿ ಹೆಚ್ಚು ಪುಷ್ಟಿಕರವಾಗಿದ್ದು, ಸ್ವಲ್ಪ-ಪ್ರಮಾಣದಲ್ಲಿ ಉಂಡರೆ ಆರೋಗ್ಯಕ್ಕೆ ಏನೂ ಬಾಧೆ ತರದಿರುವ ತಳಿಸದ ಅಕ್ಕಿಯನ್ನು ಅವರು ಉಪಯೋಗಿಸತೊಡಗಿದರೆ ಅಕ್ಕಿಯ ಪೂರೈಕೆಯಲ್ಲಿರುವ ಕೊರತೆ ಸ್ವಲ್ಪಮಟ್ಟಿಗೆ ನೀಗಬಹುದು. ಗೋದಿಯನ್ನೂ ಗೋವಿನ ಜೋಳವನ್ನೂ ಬೀಸಿ ಹಿಟ್ಟು ಮಾಡಿದರೆ ಅದರಿಂದ ರೊಟ್ಟಿ ಮಾಡಬಹುದು ಅಥವಾ ಅದನ್ನು ಬೇಯಿಸಿ ಮುದ್ದೆ ಮಾಡಬಹುದು. ಇದಲ್ಲದೆ ಆ ಧಾನ್ಯಗಳನ್ನು ಒಡೆದು ಅಕ್ಕಿಯಂತೆ ಬೇಯಿಸಿ ಅನ್ನ ಮಾಡಲೂ ಬರುತ್ತದೆ. ಗೋವಿನಜೋಳ, ಜವೆಗೋದಿ, ಕಡಲೆ ಇವುಗಳನ್ನು ಉಸುಬಿನಗೂಡ ಹುರಿದು ಬೀಸಿ ಹಿಟ್ಟು ಮಾಡಿ ಮತ್ತೆ ಬೇಯಿಸದೆ ಉಪ್ಪು ಅಥವಾ ಬೆಲ್ಲ ಹಾಕಿ ತಿನ್ನಬಹುದು. ಬಿಹಾರದಲ್ಲಿ ಹೀಗೇ ಮಾಡುತ್ತಾರೆ. ಸೀದಾ ಧಾನ್ಯಗಳಲ್ಲಿ, ಮುಖ್ಯವಾಗಿ ಅಕ್ಕಿಯಲ್ಲಿ ಇನ್ನಷ್ಟು ಕಡಿತ ಮಾಡುವದು ಅವಶ್ಯವಾಗಬಹುದು. ಇದಕ್ಕೆ ನಮ್ಮ ಜನರು ಸಿದ್ಧರಾಗಬೇಕು.

## ತ್ಯಾಗಕ್ಕೆ ಸಿದ್ಧರಾಗೋಣ

ಎಲ್ಲಕ್ಕೂ ಮಿಗಿಲಾಗಿ ನಾವೆಲ್ಲರೂ ನಮ್ಮಲ್ಲಿರುವದನ್ನು ಉಳಿದವರ ಸಂಗಡ ಪಾಲು ಮಾಡಿಕೊಂಡು ತಿನ್ನಲು ಸಿದ್ಧರಾಗಬೇಕು. ನಮ್ಮಲ್ಲಿ ಪ್ರತಿಯೊಬ್ಬನೂ ತನ್ನ ಪುಟ್ಟ ಉಗ್ರಾಣವನ್ನು ಲಕ್ಷ್ಯವಿಟ್ಟು ಪರಿಶೀಲಿಸಿ, ತನಗೆ ಸ್ವಲ್ಪ ಕಷ್ಟವಾದರೂ ಚಿಂತೆ ಮಾಡದೆ ಅದರಿಂದ ಇತರರಿಗಾಗಿ ಸಾಧ್ಯವಿದ್ದುದನ್ನು ಬಿಟ್ಟುಕೊಡಬೇಕು. ದೊಡ್ಡ ಸಂಗ್ರಹಗಳುಳ್ಳವರು, ಅವರು ಉತ್ಪಾದಕರಿರಲಿ ವ್ಯಾಪಾರಿಗಳಿರಲಿ, ಪರಿಸ್ಥಿತಿಯ ಗಂಭೀರತೆಯನ್ನು ಮನದಂದುಕೊಂಡು, ಆ ಸಂಗ್ರಹಗಳನ್ನು ಸಾರ್ವಜನಿಕ ಹಿತಕ್ಕೋಸ್ಕರ ಬಿಟ್ಟುಕೊಡಬೇಕು. ಅವರು ಬೆದರಬೇಕಾದ ಕಾರಣವಿಲ್ಲ. ಅದಕ್ಕಾಗಿ ಅವರಿಗೆ ನ್ಯಾಯವಾದ ಬೆಲೆ ಕೊಡಲಾಗುವದು. ಬೆಲೆಗಳನ್ನು ಇನ್ನು ಏರಗೊಡುವ ಸಂಭವವಿಲ್ಲ. ಇದಲ್ಲದೆ ಉಳಿದವರು ಉಪವಾಸ ಬಿದ್ದಿರುವಾಗ ಸಂಗ್ರಹಿಸಿಡುವದು ನಿಜವಾಗಿ ಅಪಾಯಕರ. ಒಟ್ಟಿನ ಮೇಲೆ ಪರಿಸ್ಥಿತಿಯು ರೂಪ ನುಬ್ಬಾಗಿದ್ದರೂ ಪೂರ್ಣ ಅಂಧಕಾರಮಯವಾಗಿಲ್ಲ. ಕಠಿಣ ಕಾಲದ ಅವಧಿ ಸ್ವಲ್ಪವೇ ಇದೆ. ಕೆಲವಡೆ ನೆರೆ, ಕೆಲವಡೆ ಅನಾವೃಷ್ಟಿಗಳಾಗಿ— ಹಿಂದುಸ್ತಾನದಂಥ ದೊಡ್ಡ ದೇಶದಲ್ಲಿ ಇವು ಅನಿವಾರ್ಯ ವಿಪತ್ತುಗಳು—ಬೆಳೆ ಸ್ವಲ್ಪ ಕೆಟ್ಟಿದ್ದರೂ ಒಟ್ಟಾರೆ ಈ ಋತುವಿನಲ್ಲಿ ನಮಗೆ ಪ್ರಕೃತಿ ಔದಾರ್ಯವನ್ನೇ ತೋರಿದ್ದಾಳೆಂದು ಹೇಳಬಹುದು. ನಾವು ಸಾಧಾರಣ ಸಮೃದ್ಧಿಯಾದ ಸುಗ್ಗಿಯನ್ನು ಎದುರುನೋಡುತ್ತಿದ್ದೇವೆ. ಮಳೆಗಾಲದ ಚಿಲ್ಲರೆ ಪೈರುಗಳು— ಬಂಗಾಲದ ಮತ್ತು ಅದರ ಹತ್ತಿರದ ಪ್ರಾಂತಗಳ ಹೊಸ ಅಕ್ಕಿ ಮತ್ತು ಬಿಹಾರ ಮೊದಲಾದ ಪ್ರಾಂತಗಳ ಗೋವಿನಜೋಳದ ಪೈರುಗಳು— ಈಗಾಗಲೆ ಸುಗಿಯಾಗಿ ಒಳಗೆ ಬಂದಿದೆ ಅಥವಾ ಬರುತಿದೆ. ಆಯಾ ಪ್ರದೇಶಗಳ ಬಿಗುಮಾನವನ್ನು ಅವು ಸ್ವಲ್ಪ ಸಡಿಲಿಸಬಹುದು, ಸಡಿಲಿಸುವವು. ಅಕ್ಕಿ ಮತ್ತು ದ್ವಿದಲ ಧಾನ್ಯಗಳ ಮುಖ್ಯ ಪೈರುಗಳು ಅದಕ್ಕಿಂತ ಮೊದಲಲ್ಲದಿದ್ದರೂ ಈ ವರ್ಷಾಂತ್ಯದೊಳಗಾದರೂ ಉಪಯೋಗಕ್ಕೆ ಬರುವವು. ಇತರರನ್ನು ಕುಸಿದು ಬೀಳುವಂತೆ ಮಾಡಬಹುದಾದಂಥ ವಿಪತ್ತುಗಳನ್ನು ಧೈರ್ಯದಿಂದ ಎದುರಿಸುವ ಸಹಜಗುಣ ನಮ್ಮ ಜನರಲ್ಲಿದೆ. ಉತ್ಪಾದನೆಯನ್ನು ಹೆಚ್ಚಿಸುವದಕ್ಕೂ ಇದ್ದದ್ದರಲ್ಲಿ ಸಾಧ್ಯವಿದ್ದಷ್ಟನ್ನು ಉಳಿಸುವದಕ್ಕೂ ನಮ್ಮಲ್ಲಿ ಬುದ್ಧಿವಂತಿಕೆ, ದೃಢನಿಶ್ಚಯಗಳು ಬಹಳವಾಗಿರಬೇಕು. ಸಾರ್ವಜನಿಕ ಸಂಗ್ರಹಕ್ಕೆ ನಾವು ಮಾಡಿದ ಲವಲೇಶ ಸಹಾಯವೂ ಕಷ್ಟದಲ್ಲಿರುವವರಿಗೆ ಉಪಕಾರಬೀಳುವದೆಂಬುದನ್ನು ನಾವು ಯಾವಾಗಲೂ ನೆನಪಿಡಬೇಕು. ಕಷ್ಟದಲ್ಲಿರುವ ನಮ್ಮ ದೇಶಬಾಂಧವರಿಗೆ ಸಹಾನುಭೂತಿ ಬಾಂಧವ್ಯಗಳನ್ನು ನಾವಿಂದು ಕೃತಿಯಿಂದ ತೋರಿಸಬೇಕಾಗಿದೆ. ನಾವೆಲ್ಲರೂ ಸೇರಿ ಜಗ್ಗಬೇಕು, ದೃಢಬುದ್ಧಿಯಿಂದ ಬಲವಾಗಿ ಜಗ್ಗಬೇಕು. ಅಂದರೆ ವಿಪತ್ತನ್ನು ದಾಟಿಹೋಗಬಲ್ಲೆವು. ನಾವು ಸೋಲೊಪ್ಪಿಕೊಳ್ಳಕೂಡದು. ಶಿಸ್ತು, ಸಹಾನುಭೂತಿ ಮತ್ತು ಸ್ವಲ್ಪ ತ್ಯಾಗ ಇವಿಷ್ಟನ್ನು ನಾವು ಪ್ರತಿಯೊಬ್ಬರೂ ಎಲ್ಲರಿಗಾಗಿ ಮತ್ತು ಎಲ್ಲರೂ ಪ್ರತಿಯೊಬ್ಬನಿಗಾಗಿ ಮಾಡಿದರೆ ನಾವು ಪಾರಾಗದೆ ಇರಲಾರೆವು.

# ಜೀವನ ಮತ್ತು ವಿಜ್ಞಾನ

## 'ಎ' ಜೀವ ಸತ್ತ್ವ ಮತ್ತು ಕಣ್ಣಿನ ಜಾಡ್ಯ

[ಲೇ:- ವೆಂಕೋಬಾಚಾರ್ಯ ಉಪಾಧ್ಯಯ, ಎಂ. ಎಸ್ ಸಿ.

ಶರೀರದ ಬೆಳವಣಿಗೆಗೂ ಮತ್ತು ಜೀರ್ಣಶಕ್ತಿಯನ್ನು ಹೆಚ್ಚಿಸುವದಕ್ಕೂ "ಎ" ಜೀವಸತ್ತ್ವವು ಬಹಳ ಅವಶ್ಯಕ. ಇದು ಶರೀರದ ಭಾಗಗಳಲ್ಲಿಯ ಒಳ ಪೊರೆಗಳನ್ನು ರಕ್ಷಿಸುವುದಲ್ಲದೆ ಚರ್ಮದ ಪೋಷಣೆ ಕೂಡ ಮಾಡುತ್ತದೆ. ಎಲ್ಲಕ್ಕೂ ಮೊದಲು ೧೮೮೮ರಲ್ಲಿ 'ಎ' ಜೀವ ಸತ್ತ್ವದ ವಿಷಯಕ್ಕೆ ಸಂಶೋಧನೆ ನಡೆಯಿಸಿದವನು ಸ್ವಿಜರಲಂಡದ ಸಂಶೋಧಕನಾದ ಲೂನಿನ್ (Lunin) ಎಂಬಾತನು. ಈತನ ತರುವಾಯ ೧೯೩೧ರಲ್ಲಿ ಸ್ವಿಜರ್ಲಂಡದ ಇನ್ನೊಬ್ಬ ವೈಜ್ಞಾನಿಕನಾದ ಕೇರರ್ (Carrer) ಎಂಬಾತನು, ಹಸಿರಿನಲ್ಲಿ ಕ್ಲೊರೋಫಿಲ್ (Chlorophyll) ಜೊತೆಗೆ ಒಂದು ತರದ ಹಳದಿ ಪದಾರ್ಥ ಕೆರೋಟಿನ್ (Carotene) ಇರುತ್ತದೆಯೆಂದು ಮತ್ತು ಇದರಿಂದ 'ಎ' ಜೀವಸತ್ತ್ವ ತಯಾರಾಗುತ್ತಿದೆ ಎಂದು ಸಿದ್ಧಿಸಿ ತೋರಿಸಿದನು.

ಅಮೇರಿಕೆಯಲ್ಲಿ ಕೆಲವು ವರ್ಷಗಳಿಂದ 'ಕಣ್ಣಿನ ಜಾಡ್ಯ ಮತ್ತು ಅದರ ಚಿಕಿತ್ಸೆ"ಯ ವಿಷಯಕ್ಕೆ ಎಷ್ಟೊ ಸಂಶೋಧನೆಗಳು ನಡೆದಿದ್ದು, ಅದರ ಪರಿಣಾಮವಾಗಿ 'ಎ" ಜೀವ ಸತ್ತ್ವಕ್ಕೂ ಮತ್ತು ಕಣ್ಣಿನ ಜಾಡ್ಯಕ್ಕೂ ನಿಕಟ ಸಂಬಂಧವಿದೆಯೆಂದೂ ಕಂಡು ಹಿಡಿಯಲಾಗಿದೆ. ಅಮೇರಿಕೆಯ ಕಣ್ಣಿನ ವೈದ್ಯರಾದ ಡಾ ಜೆನ್ಸ್ ಮತ್ತು ಡಾ. ಜೇಂಥ್‌ಮಾಯಿರ್ (Dr. Jens and Dr. Zentmire) ರವರು, ಕೆರೊಟೀನ್ ಮತ್ತು 'ಎ" ಜೀವಸತ್ತ್ವವಿರುವ ಆಹಾರ ಪದಾರ್ಥಗಳನ್ನು ಹೆಚ್ಚಾಗಿ ಸೇವಿಸಿದರೆ ಕಣ್ಣಿನ ಜಾಡ್ಯ ದೂರವಾಗಬಹುದೆಂದು ಪ್ರಯೋಗಗಳಿಂದ ಸಿದ್ಧಿಸಿ ತೋರಿಸಿದ್ದಾರೆ. 'ಎ" ಜೀವಸತ್ತ್ವವಿಲ್ಲದ ಆಹಾರವನ್ನು ಬಹುಕಾಲದವರೆಗೆ ಸೇವಿಸಿದಲ್ಲಿ ಕಣ್ಣಿನ ಜಾಡ್ಯ ಉಂಟಾಗುವುದಲ್ಲದೆ ಒಂದೊಂದು ವೇಳೆ ಕುರುಡತನ ಕೂಡ ಪ್ರಾಪ್ತವಾಗಬಹುದೆಂದು ಡಾ. ಎಫ್. ಹೇಲ್ (Dr. F. Hale) ರವರ ಅಭಿಪ್ರಾಯ.

ಮನುಷ್ಯನು ಜ್ವರದಿಂದ ಬಳಲುತ್ತಿದ್ದಾಗ 'ಎ" ಜೀವಸತ್ತ್ವವು ಬಹು ಬೇಗನೆ ನಷ್ಟವಾಗುತ್ತದೆ. ಕಾರಣ ಬೇನೆಯಿಂದ ಆರೋಗ್ಯ ಹೊಂದಿದವರು ಮತ್ತು ವಿಶೇಷವಾಗಿ ಕಣ್ಣಿನ - ಜಾಡ್ಯದಿಂದ ಬಳಲುವವರು 'ಎ" ಜೀವಸತ್ತ್ವವಿರುವ ಆಹಾರ ಪದಾರ್ಥಗಳನ್ನು (ಹಾಲು, ಬೆಣ್ಣೆ, ತತ್ತಿ, ಮೀನದ ಎಣ್ಣೆ, ಸೊಪ್ಪುಗಳು ಮತ್ತು ಗೆಣಸು) ಹೆಚ್ಚಾಗಿ ಸೇವಿಸಿದಲ್ಲಿ ಅವರು ಸಂಪೂರ್ಣ ಆರೋಗ್ಯ ಹೊಂದುವುದರಲ್ಲಿ ಏನೂ ಸಂದೇಹವಿಲ್ಲ.

## ಬಣ್ಣದಿಂದ ಮೆದಳ ರೋಗಗಳ ಚಿಕಿತ್ಸೆ

ಈಗೀಗ ಪೆಡಿಂಗಟನ್ ನಗರದ 'ಸೇಂಟ್ ಮೆರಿ" ಆಸ್ಪತ್ರೆಯಲ್ಲಿ ಮೆದುಳು ರೋಗದ ಚಿಕಿತ್ಸೆ ಒಂದು ಹೊಸದಾದ ವಿಧಾನದಿಂದ ನಡೆದು, ಶಸ್ತ್ರಚಿಕಿತ್ಸೆಯಲ್ಲಿ ಒಂದು ವಿಚಿತ್ರವಾದ ಗಲಭೆ ಉಂಟಾಗಿದೆ. ರೋಗಿಗೆ ಮೂಲಾಹಾಯಿಟ್ (Malhaite) ಹಸರುಬಣ್ಣದ ಇಂಜಕ್ಶನ್ ಕೊಡುವುದರಿಂದ ಇದರ ಪರಿಣಾಮವಾಗಿ ಮೆದುಳಿನ ಸಹಜ ಅಣುಗಳ ರಚನೆಯ ವರ್ಣ ಬೆಳ್ಳಗಿದ್ದು ದುರ್ಬಲ ಅಣುಗಳ ಬಣ್ಣ ಹಸಿರಾಗುತ್ತದೆ. ಹಸಿರಾದ ಭಾಗವನ್ನಷ್ಟೆ ಶಸ್ತ್ರಗಳ ಮೂಲಕ ಬೇರ್ಪಡಿಸುವುದರಿಂದ ಮೆದುಳಿನ ಉಳಿದ ಭಾಗಕ್ಕೆ ಯಾವ ಅಪಾಯವೂ ಆಗುವದಿಲ್ಲ. ಈ ವಿಧಾನದಿಂದ ರೋಗಿಯ ದೇಹ ಮತ್ತು ಕಣ್ಣಿನ ಮೇಲೆ ಗಾಢವಾದ ಬಣ್ಣ ಮಾತ್ರ ಬಂದು ಯಾವ ತರದ ಅಪಾಯವಾಗದೆ [illegible] ಅಥವಾ ನಾಲ್ಕು ದಿನಗಳಲ್ಲಿ ಇದು ಮಾ[illegible]ಗುತ್ತದೆ.

ಇಲ್ಲಿಯವರೆಗೆ ಈ ಬಣ್ಣವನ್ನು ಉಪಯೋಗಿಸಿ ಹನ್ನೆರಡು ಶಸ್ತ್ರ ಚಿಕಿತ್ಸೆಗಳನ್ನು ಮಾಡಲಾಗಿದ್ದು ಎಲ್ಲವೂ ಫಲಕಾರಿಯಾಗಿವೆ.

## 'ಕ್ಷ' ಕಿರಣಗಳ ಒಂದು ಹೊಸ ಉಪಯೋಗ

ಇವತ್ತು ನಾಳೆ ಇಂಗ್ಲಂಡದಲ್ಲಿ ಮದುಮಕ್ಕಳು ಅಮೇರಿಕನ್ ಗಂಡಂದಿರ ಸಂಗಡ ಗುಪ್ತರೀತಿಯಿಂದ ಓಡಿಹೋಗುವುದು ಪ್ರಾರಂಭವಾಗಿಬಿಟ್ಟಿದೆ. ಹೀಗೆ ಗುಪ್ತ ರೀತಿಯಿಂದ ಓಡಿಹೋಗಬೇಕಾದರೆ ಅವರು ಸಾಮಾನುಗಳ ಚೀಲದಲ್ಲಿ ಅಡಗಿಕೊಂಡು ಅಟ್ಲಾಂಟಿಕ ಮಹಾಸಾಗರವನ್ನು ಪಾರುಮಾಡಬೇಕಾಗುತ್ತದೆ. ಈ ಸುದ್ದಿ ಗೊತ್ತಾದಂದಿನಿಂದ ಸರಕಾರದವರು, ಇಂಥ ವರ್ತನೆಯನ್ನು ಸಂಪೂರ್ಣ ನಿಲ್ಲಿಸಲು, ಲಿವ್ಹರ್‌ಪೂಲ್ ಸೌಥಂಪ್ಟನ್ ಮತ್ತು ಗ್ಲಾಸಗೊ ಬಂದರುಗಳಲ್ಲಿಯ ಪೋಲೀಸಿನವರಿಗೆ ಎಚ್ಚರಿಕೆ ಕೊಟ್ಟಿದಲ್ಲದೆ, ಈ ಮೂರು ಬಂದರುಗಳಲ್ಲಿ ಒಂದು ವಿಶಿಷ್ಟತರದ 'ಕ್ಷ" ಕಿರಣಗಳ ಯಂತ್ರವನ್ನು ಹಡಗದಿಂದ ದಂಡೆಗೆ ಬರುವ ದಾರಿಯಲ್ಲಿ ಸ್ಥಾಪಿಸಿದ್ದಾರೆ. ಪ್ರಯಾಣಿಕರ ಪ್ರತಿ ಒಂದು ಸಾಮಾನುಗಳ ಗಂಟನ್ನು ಅಥವಾ ಚೀಲವನ್ನು ಒಂದು ಪಡದೆಯ ಎದುರಿನಲ್ಲಿ ಇಡಲಾಗುತ್ತಿದೆ. ಗಂಟು ಬಿಚ್ಚದೆಯೆ 'ಕ್ಷ" ಕಿರಣಗಳ ಯಂತ್ರದ ಸಹಾಯದಿಂದ ಅದರೊಳಗಿದ್ದ ವಸ್ತುವು ಕಾಣಿಸಿಕೊಳ್ಳುತ್ತದೆ ಈಗಾಗಲೆ ಈ ಯಂತ್ರದ ಸಹಾಯದಿಂದ ಚೀಲಗಳಲ್ಲಿ ಅಡಗಿಕೊಂಡು ಓಡಿ ಹೋಗುವ ಎಷ್ಟೊ ಮದುಮಕ್ಕಳನ್ನು ತಡೆದು ನಿಲ್ಲಿಸಿದ್ದಾರೆ. ಹೀಗಾಗಿ ಇಂಗ್ಲಂಡದ ಮದುಮಕ್ಕಳ ಆಟವು ಸಾಗದಂತಾಗಿದೆ. ಹೇಗಿದೆ ! 'ಕ್ಷ" ಕಿರಣಗಳ ಹೊಸ ಉಪಯೋಗ ?





## ಎ. ಆಯ. ಸಿ. ಸಿ. ಯ ನಿರ್ಣಯ

ದಿಲ್ಲಿಯಲ್ಲಿ ಕಳೆದ ವಾರದ ಕೊನೆಯಲ್ಲಿ ಕೂಡಿದ ಅಖಿಲ ಭಾರತ ಕಾಂಗ್ರೆಸ ಸಮಿತಿಯು ಎರಡು ಮಹತ್ವದ ಗೊತ್ತುವಳಿಗಳನ್ನು ಸ್ವೀಕರಿಸಿ ದೇಶಕ್ಕೆ ನಿಚ್ಚಳ ಮಾರ್ಗವನ್ನು ತೋರಿಸಿಕೊಟ್ಟಿದೆ. ದೇಶದ ಸದ್ಯದ ಪರಿಸ್ಥಿತಿಯನ್ನು ಮತ್ತು ಜನತೆಯ ಹಿತಸಂಬಂಧಗಳನ್ನು ಲಕ್ಷಿಸಿ ವ್ಹಾಯಿಸರಾಯರ ಕರೆಯನ್ನು ಮನ್ನಿಸಿ ನಡುಗಾಲ ಸರಕಾರ ಸ್ಥಾಪಿಸಿದ್ದಕ್ಕೆ ಒಪ್ಪಿಗೆ ಕೊಟ್ಟುದು ಮೊದಲನೆಯ ಗೊತ್ತುವಳಿ. ಇನ್ನೂ ಪೂರ್ಣ ಸ್ವತಂತ್ರವಾಗದ ಹಿಂದುಸ್ತಾನದಂಥ ದೇಶದಲ್ಲಿ ನಡುಗಾಲ ಸರಕಾರದಲ್ಲಿ ಮಂತ್ರಿಗಳಾಗಿದ್ದವರು ಕೂಡ ಕಾಂಗ್ರೆಸ ಕಾರ್ಯ ಸಮಿತಿಯ ಸದಸ್ಯರಾಗುಳಿಯಬಹುದೆಂಬುದು ಎರಡನೆಯ ಗೊತ್ತುವಳಿ. ಇವೆರಡೂ ಗೊತ್ತುವಳಿಗಳ ಮೇಲೆ ತೀವ್ರ ಚರ್ಚೆಯಾಗಿ ಸಾಧಕ ಬಾಧಕ ಕಾರಣಗಳ ವಿಚಾರವಾಗಿ ಪ್ರಚಂಡ ಬಹುಮತದಿಂದ ಇವು ಸ್ವೀಕೃತವಾದವು. ನಡುಗಾಲ ಸರಕಾರ ರಚಿಸಿದ್ದನ್ನು ಟೀಕಿಸುವ ಭಾಷಣಗಳಿಗೆ ಡಾ. ಪಟ್ಟಾಭಿಯವರು ಉತ್ತರ ಕೊಡುತ್ತ ಕಾಂಗೆಸ್ಸು ಯಾವಾಗಲೂ ಹೋರಾಟ ಸಾಗಿಸಲಾರದು. ಪ್ರತಿಯೊಂದು ಹೋರಾಟದ ನಂತರ ವಿಶ್ರಾಂತಿ ಅವಶ್ಯವಿದೆ. ನಡುಗಾಲ ಸರಕಾರವೊಂದು ಸೇತುವೆಯೆಂದು ಮುಂತಾಗಿ ಹೇಳಿದರು. ಈ ಮಾರ್ಗದಿಂದ ಸ್ವತಂತ್ರಕ್ಕೆ ಅಡ್ಡಿಯಾಗುತಿದ್ದರೆ ಹೋರಾಟದ ದ್ವಾರ ಕಾಂಗ್ರೆಸ್ಸಿಗೆ ಯಾವಾಗಲೂ ತೆರೆದಿದೆ. ನಡುಗಾಲ ಸರಕಾರದಲ್ಲಿ ಕಾಂಗ್ರೆಸಿಗರನ್ನು ಸೇರಿಸಿ ಅವರನ್ನು ಮೋಸಗೊಳಿಸಲಾಗುವದೆಂಬ ಟೀಕೆಗೂ ಮೌಲಾನಾರು ಮಾರ್ಮಿಕ ಉತ್ತರ ಕೊಡುತ್ತ ಇಂಥ ಅಂಜಿಕೆಗಳಿಗಾಗಿ ಹೊಣೆಗಾರಿಕೆಯನ್ನು ಹಾರಿಸಿಕೊಳ್ಳತಕ್ಕದ್ದಲ್ಲೆಂದು ಹೇಳಿದ್ದು ಯಥೋಚಿತವಾಗಿದೆ. ಮುಸ್ಲಿಂಲೀಗಿನವರಿಗೆ ನಡುಗಾಲ ಸರಕಾರದಲ್ಲಿ ಸೇರಲು ಮುಕ್ತದ್ವಾರವಿಡಲಾಗಿದೆ. ಮುಸ್ಲಿಂ ಲೀಗಿನವರನ್ನು ಹಿಂದಕ್ಕಟ್ಟಿ ಕಾಂಗ್ರೆಸ್ಸು ಅಧಿಕಾರ ಸ್ವೀಕರಿಸಿತೆಂಬ ಟೀಕೆಗೂ ಇದರಿಂದ ಅವಕಾಶ ಸಿಕ್ಕದು. ನಡುಗಾಲ ಸರಕಾರದಲ್ಲಿದ್ದವರು ಕಾರ್ಯಸಮಿತಿಯ ಸದಸ್ಯರಾಗುಳಿಯಲಾರರೆಂಬ ಟೀಕೆಗೆ ಪಂಡಿತ ಪಂತ ಆಚಾರ್ಯ ಕೃಪಲಾನಿ ಪಂಡಿತ ಜವಾಹರಲಾಲರು ಕೊಟ್ಟ ಉತ್ತರ ಸಮಂಜಸವಾಗಿದೆ. ಎರಡೂ ಸಂಸ್ಥೆಗಳು ನಮ್ಮ ಸ್ವಾತಂತ್ರ್ಯ ಸಂಗ್ರಾಮದ ಸಾಧನವಾದ್ದರಿಂದ ಅವೆರಡರಲ್ಲಿಯೂ ಕಾಂಗ್ರೆಸ ಧುರೀಣರಿರುವುದಕ್ಕೆ ಯಾವ ಪ್ರತ್ಯವಾಯವೂ ಇಲ್ಲ. ಈ ರೀತಿಯಾಗಿ ಕಾಂಗ್ರೆಸ್ಸು ಮಹತ್ವದ ಗೊತ್ತುವಳಿಗಳನ್ನು ಸ್ವೀಕರಿಸಿ ಹಲವು ಕಾಂಗ್ರೆಸಿಗರಲ್ಲಿದ್ದ ಸಂಶಯಗಳನ್ನು ನಿವಾರಿಸಿದ್ದುದು ಯುಕ್ತವಾಯಿತು. ಕಾಂಗ್ರೆಸ ಅಧ್ಯಕ್ಷರು ಮಾತ್ರ ನಡುಗಾಲ ಸರಕಾರದಲ್ಲಿರುವುದು ಸರಿಯಲ್ಲೆಂದು ಭಾವಿಸಿ ಪಂಡಿತ ಜವಾಹರಲಾಲರು ನಿವೃತ್ತರಾದುದು ಸಮಯೋಚಿತವಾಗಿದೆ. ಕಾಂಗ್ರೆಸ್ಸಿನ ವರಿಷ್ಠರ ಧೋರಣ ಮತ್ತು ನಡತೆಯಲ್ಲಿ ಅ. ಭಾ. ಕಾಂಗ್ರೆಸ ಸಮಿತಿಯಿಂತು ಅಚಲ ವಿಶ್ವಾಸ ವ್ಯಕ್ತಪಡಿಸಿದ್ದು ಅತ್ಯಂತ ಸಮಂಜಸವಾಗಿದೆ.

## ಗಂಭೀರ ಆಹಾರ ಪರಿಸ್ಥಿತಿ

ನಡುಗಾಲ ಸರಕಾರದ ಆಹಾರ ಮಂತ್ರಿಗಳಾದ ಬಾಬು ರಾಜೇಂದ್ರ ಪ್ರಸಾದರು ದೇಶದ ಆಹಾರ ಪರಿಸ್ಥಿತಿಯ ಬಗ್ಗೆ ಆಕಾಶವಾಣಿ ಭಾಷಣಮಾಡಿ ಅದರ ಗಂಭೀರತೆಯನ್ನು ವಿವರಿಸಿ ಜನತೆಯ ಕರ್ತವ್ಯವನ್ನು ತೋರಿಸಿ ಕೊಟ್ಟರು. ಅವರ ಭಾಷಣವನ್ನು ಇಡಿಯಾಗಿ ಬೇರೆಡೆ ಕೊಟ್ಟದ್ದೇವೆ. ಹಿಂದುಸ್ತಾನದಲ್ಲಿ ಬೆಳೆ ಸಾಕಷ್ಟು ಚೆನ್ನಾಗಿ ಇಲ್ಲದ್ದರಿಂದ, ಪರದೇಶದಿಂದ ಬರತಕ್ಕ ಧಾನ್ಯ ತೀರ ಕಡಮೆಯಾದ್ದರಿಂದ ಜಾವಾ ಸಯಾಮುಗಳಲ್ಲಿ ಸಾರಿಗೆಯ ತೊಂದರೆಯಿರುವದರಿಂದ ಅರ್ಜೆಂಟಾಯಿನದಿಂದ ನಿರೀಕ್ಷಿತ ಧಾನ್ಯದ ಆಯಾತದಲ್ಲಿ ತೊಡಕುಂಟಾದ್ದರಿಂದ ಇನ್ನು ೨—೩ ತಿಂಗಳು ನಾವು ಕಠಿಣ ಪರಿಸ್ಥಿತಿಯಲ್ಲಿ ಕಾಲಕಳೆಯಬೇಕಾಗಿದೆ ಎಂದು ರಾಜೇಂದ್ರ ಬಾಬುಗಳು ಹೇಳಿದರು. ಈ ಸಲ ಬೆಳೆ ಎಲ್ಲ ಕಡೆಗೆ ಚೆನ್ನಾಗಿರುವುದರಿಂದ ಸುಗ್ಗಿಯಾದ ಬಳಿಕ ಯಾವ ತೊಂದರೆಯೂ ಆಗದು. ಆದರೆ ಸುಗ್ಗಿಯಾಗುವ ವರೆಗೆ ಮಾತ್ರ ಹೇಗಾದರೂ ಕಾಲಕಳೆಯಬೇಕಾಗಿದೆಂದು ಆಹಾರ ಮಂತ್ರಿಗಳು ಕೇಳಿಕೊಂಡಿದ್ದಾರೆ. ಈ ಪರಿಸ್ಥಿತಿಯನ್ನೆದುರಿಸಲು ಮೂರು ಮಾರ್ಗಗಳನ್ನು ರಾಜೇಂದ್ರ ಬಾಬುಗಳು ಸೂಚಿಸಿದ್ದಾರೆ. ಮುಖ್ಯ ಬೆಳೆಗಳ ನಡುವಿನ ಸಮಯದಲ್ಲಿ ಬೆಳೆಸಬಹುದಾದ ಪೈರುಗಳ ಉತ್ಪಾದನೆಯನ್ನು ಹೆಚ್ಚಿಸುವದು, ಹೊರಗಿನಿಂದ ಸಹಾಯವನ್ನು ದೊರಕಿಸಿಕೊಳ್ಳುವದು ಮತ್ತು ಕೊರತೆಯ ಅಂಶವನ್ನು ದೇಶದಲ್ಲೆಲ್ಲ ಆದಷ್ಟು ಸಮಾನವಾಗಿ ಹಂಚುವದು ಇವೇ ಆಯಾ ಮಾರ್ಗಗಳೆಂದು ಅವರು ಸೂಚಿಸಿದ್ದಾರೆ. ಹಿಂದುಸ್ತಾನ ಇಷ್ಟೊಂದು ವಿಶಾಲ ರಾಷ್ಟ್ರವಾಗಿದ್ದರೂ, ಭೂಸಂಪತ್ತು ವಿಪುಲವಾಗಿದ್ದರೂ ಹಿಂದಿನ ಸರಕಾರದವರು ನೀರಾವರಿ ಮೊದಲಾದ ಯೋಜನೆಗಳನ್ನು ಕೈಕೊಳ್ಳದ್ದರಿಂದ ಬರಬೇಕಾದಷ್ಟು ಬೆಳೆ ಇಲ್ಲಿ ಬರುವದಿಲ್ಲ. ಅಂತೆಯೆ ಯುದ್ಧಪೂರ್ವದಲ್ಲಿಯೂ ಪರದೇಶಗಳಿಂದ ಆಹಾರ ಧಾನ್ಯಗಳನ್ನು ತರಿಸಿಕೊಳ್ಳಬೇಕಾಗುತಿದ್ದಿತು. ಇದು ತಪ್ಪಬೇಕಾದರೆ ನಮ್ಮ ಭೂಮಿಗಳಲ್ಲಿ ಹೆಚ್ಚು ಬೆಳೆ ಬರುವಂತೆ ಯೋಜಿಸತಕ್ಕದ್ದು. ಆದರೆ ಇದೆಲ್ಲ ಕಾಲಾವಧಿಯ ಮಾತಾಯಿತು. ಸದ್ಯಕ್ಕೆ ಬಂದ ಗಂಡಾಂತರವನ್ನೆದುರಿಸಲು ರಾಜೇಂದ್ರ ಬಾಬುಗಳು ಸೂಚಿಸಿದ ಮಾರ್ಗಗಳು ಸಮಂಜಸವಾಗಿವೆ. ಮುಖ್ಯವಾಗಿ ಆಹಾರ ಪದಾರ್ಥಗಳು ಸಮಾನವಾಗಿ ಎಲ್ಲೆಡೆ ಹಂಚಲ್ಪಡತಕ್ಕದ್ದು. ಇನ್ನೂ ಅನೇಕರಲ್ಲಿ ಆಹಾರ ಸಂಗ್ರಹವಿರುವದು. ಅವರೆಲ್ಲ ತ್ಯಾಗಬುದ್ಧಿಯಿಂದ ಮುಂದೆ ಬಂದು ಸರಕಾರಕ್ಕೆ ತಮ್ಮಲ್ಲಿದ್ದ ಸಂಗ್ರಹಗಳನ್ನೆಲ್ಲ ಕೊಟ್ಟುಬಿಡಬೇಕು. ಇಂಥ ವಿಪತ್ಕಾಲದಲ್ಲಿ ಮಾಡಿದ ದಾನವು ಪರಮ ಶ್ರೇಯಸ್ಸಿಗೆ ಕಾರಣವೆಂಬುದನ್ನು ಅವರು ಮರೆಯಬಾರದು. ದೊರೆತ ಧಾನ್ಯಗಳು ಯೋಗ್ಯ ರೀತಿಯಿಂದ ಸಕಾಲದಲ್ಲಿ ಸಮಾನವಾಗಿ ಹಂಚಲ್ಪಡುವಂತೆ ನೋಡಿಕೊಳ್ಳುವದು ಸರಕಾರೀ ಅಧಿಕಾರಿಗಳ ಕರ್ತವ್ಯವಾಗಿದೆ. ಆಹಾರದ ಹಂಚಿಕೆಯಲ್ಲಿ ಸರಕಾರೀ ಅಧಿಕಾರಿಗಳು ಅಷ್ಟೊಂದು ಜಾಗ್ರತೆ ವಹಿಸುವದಿಲ್ಲ, ಲಂಚಗುಳಿತನ, ಪಕ್ಷಪಾತಕ್ಕೆಳಸುವರೆಂದು ಮುಂತಾದ ಆರೋಪಗಳು ಕೇಳಬರುತ್ತಿವೆ. ಈ ಬಗೆಯ ಆರೋಪಗಳಿಗೆ ಅವಕಾಶವುಂಟಾಗದಂತೆ ಅಧಿಕಾರಿಗಳು ನೋಡಿಕೊಳ್ಳತಕ್ಕದ್ದು. ಹಿಂದೆ:ಪರಕೀಯ ಸರಕಾರವಿದ್ದಾಗ ಏನೇ ಆಗಿರಲಿ, ಈಗ ನಮ್ಮದೇ ಸರಕಾರ ಆಡಳಿತ ಸಾಗಿಸುತಿರುವಾಗ ಅವರಿಗೆ ಎಲ್ಲ ರೀತಿಯಿಂದ ಸಹಾಯ ನೀಡುವದು ಪ್ರತಿಯೊಬ್ಬ ಅಧಿಕಾರಿಯ ಕರ್ತವ್ಯ. ಜನರಾದರೂ ಹಿಂದಿನಂತೆ ಅವಶ್ಯಕತೆಗಿಂತ ಹೆಚ್ಚು ಧಾನ್ಯ ಸಿಕ್ಕಬೇಕೆಂದು ಅಪೇಕ್ಷಿಸದೆ ಸ್ವಲ್ಪ ಕಡಮೆ ಸಿಕ್ಕರೂ ಎದೆಗುಂದದೆ ಕೆಲಮಟ್ಟಿಗೆ ಸ್ವಾರ್ಥತ್ಯಾಗಮಾಡಬೇಕು. ಹೀಗೆ ಎಲ್ಲರೂ ತಮ್ಮ ಕರ್ತವ್ಯಮಾಡಿ ಬರುವ ಸುಗ್ಗಿಯ ವರೆಗಿನ ಅವಧಿಯನ್ನು ಹೇಗಾದರೂ ಕಳೆಯಬೇಕೆಂದು ಕೇಳಿಕೊಳ್ಳುತ್ತೇವೆ.

# ಸಂಪಾದಕೀಯ * * * * * * * *

# ಟೀಕೆ-ಟಿಪ್ಪಣೆಗಳು

## ವಾಣಿಜ್ಯ ಮಂತ್ರಿಗಳ ಆಶ್ವಾಸನ

ನಡುಗಾಲ ಸರಕಾರದ ವಾಣಿಜ್ಯ ಮಂತ್ರಿಗಳಾದ ಶ್ರೀ ಭಾಭಾರವರು ತಮ್ಮ ಸರಕಾರದ ವ್ಯಾಪಾರ ಧೋರಣವನ್ನು ನಿಚ್ಚಳವಾದ ಮಾತುಗಳನ್ನು ಹೇಳಿದ್ದಾರೆ. ಬ್ರಿಟಿಶ್ ಸರಕಾರದವರು ವ್ಯಾಪಾರದ ಉದ್ದೇಶದಿಂದಲೆ ಹಿಂದುಸ್ತಾನಕ್ಕೆ ಬಂದದ್ದರಿಂದ ಪ್ರಾರಂಭದಿಂದ ಈಗಿನ ವರೆಗೆ ತಮ್ಮ ವ್ಯಾಪಾರ ಹೇಗೆ ಬೆಳೆಸಬೇಕೆಂಬದಕ್ಕೆ ಹೆಚ್ಚು ಮಹತ್ವ ಕೊಡುತಿರುವರು. ತಮ್ಮ ದೇಶದಲ್ಲಿ ಸಿದ್ಧವಾದ ಸರಕುಗಳನ್ನು ಹಿಂದುಸ್ತಾನದ ಪೇಟೆಯಲ್ಲಿ ಯಥೇಚ್ಛ ಸಾಗಿಸಿದರು. ಇದಕ್ಕಾಗಿ ಬಗೆಬಗೆಯ ಯುಕ್ತಿ ಪ್ರಯುಕ್ತಿಗಳನ್ನು ಮಾಡಿದರು. ಇಲ್ಲಿ ಊರ್ಜಿತ ಸ್ಥಿತಿಯಲ್ಲಿದ್ದ ಕೈಗಾರಿಕೆಗಳನ್ನೆಲ್ಲ ನಾಶಗೊಳಿಸಿ ಇಲ್ಲಿಂದ ಕಚ್ಚಾಮಾಲು ಒಯ್ದು ವಿಧವಿಧ ಸರಕುಗಳನ್ನು ಸಿದ್ಧಪಡಿಸಿ ನಾಲ್ಕು ಪಟ್ಟು ಬೆಲೆಗೆ ಇಲ್ಲಿ ಮಾರಹತ್ತಿದರು. ಇಲ್ಲಿನ ಉದ್ಯೋಗ ಧಂದೆಗಳಿಗೆ ಅವಶ್ಯಕ ಸಂರಕ್ಷಣೆ ಕೊಡದ್ದರಿಂದ ಅವು ಒಂದೊಂದರಂತೆ ಮೂಲೆಗುಂಪಾಗುತ್ತ ಬಂದವು. ಘಾತುಕ ವಿನಿಮಯ ದರದಿಂದಲೂ ಹಿಂದೀ ಕೈಗಾರಿಕೆಗಳಿಗೆ ವಿಪರೀತ ಪೆಟ್ಟು ಬಿದ್ದಿತು. ಅಂತೆಯೆ ಹಿಂದುಸ್ತಾನವು ಎಲ್ಲ ಅವಶ್ಯಕ ಪದಾರ್ಥಗಳಿಗಾಗಿ ಪರದೇಶದ ಮೋರೆ ನೋಡುತ್ತ ಕೂಡ್ರಬೇಕಾಗಿದೆ. ಈಗ ಅಂತರ್‌ರಾಷ್ಟ್ರೀಯ ವ್ಯಾಪಾರ ಹಾಗು ಉದ್ಯೋಗ ಪರಿಷತ್ತನ್ನು ಅಮೇರಿಕೆಯು ಕರೆದಿದ್ದು ಸ್ವಾರ್ಥ ಪ್ರೇರಿತವಾಗಿ ಆಯಾ ಪ್ರಬಲ ರಾಷ್ಟ್ರಗಳು ಉದಾತ್ತ ತತ್ವಗಳ ಮರೆಯಲ್ಲಿ ತಮ್ಮ ಬೇಳೆ ಬೇಯಿಸಿಕೊಳ್ಳಬೇಕೆಂಬ ಹವಣಿಕೆಯಲ್ಲಿರುವವು. ಹಿಂದುಸ್ತಾನದಂಥ ನಿಬಿಡ ಭೂಸಂಪತ್ತಿರುವ ವಿಶಾಲ ದೇಶದಲ್ಲಿ ಮತ್ತು ಬೇರೆ ಸಣ್ಣ ಸಣ್ಣ ರಾಷ್ಟ್ರಗಳಲ್ಲಿ ವ್ಯಾಪಾರೋದ್ಯೋಗಗಳ ಅಭಿವೃದ್ಧಿಯನ್ನುಂಟುಮಾಡಬೇಕೆಂಬ ಧೋರಣೆಯನ್ನು ಈ ಪ್ರಬಲ ರಾಷ್ಟ್ರಗಳು ವಹಿಸಿದ್ದರೆ ಹೆಚ್ಚು ಒಳಿತಾಗುತಿತ್ತು. ಇರಲಿ. ಈ ಪರಿಷತ್ತು ಇಷ್ಟೊಂದು ಸಂಕುಚಿತ ಧೋರಣವನ್ನಿಟ್ಟುಕೊಂಡು ಕೂಡುತಿದ್ದರೂ ಹಿಂದುಸ್ತಾನವು ತನ್ನ ಪ್ರತಿನಿಧಿಯನ್ನು ಕಳಿಸಿ ಅಂತರ್‌ರಾಷ್ಟ್ರೀಯ ವ್ಯಾಪಾರ ಧೋರಣೆ ವಿಶುದ್ಧ ತತ್ವದ ಮೇಲೆ ಸಾಗಬೇಕೆಂಬುದನ್ನು ಪ್ರತಿಪಾದಿಸಲು ನಿರ್ಧರಿಸಿದ್ದು ಉಚಿತವಾಗಿದೆ. ಮೇಲೆ ಹೇಳಿದ ಉದಾತ್ತ ತತ್ವದ ಆಧಾರದ ಮೇಲೆ ಹಿಂದುಸ್ತಾನಕ್ಕೆ ಬರುವ ಸರಕುಗಳಿಗೆಲ್ಲ ಮುಕ್ತದ್ವಾರವಿಟ್ಟರೆ ನಮ್ಮ ದೇಶವು ಕೊನೆಯ ವರೆಗೂ ಔದ್ಯೋಗಿಕ ಹಾಗು ವ್ಯಾಪಾರದ ದೃಷ್ಟಿಯಿಂದ ಹಿಂದುಳಿಯಬೇಕಾಗುವದೆಂಬ ಮಾತು ಸುಸ್ಪಷ್ಟವಾಗಿದೆ. ಶ್ರೀ ಭಾಭಾ ಇವರು ಹೊಸ ಸರಕಾರದ ಧೋರಣದ ನಾಲ್ಕು ಸೂತ್ರಗಳನ್ನು ಒಳ್ಳೆ ಮಾರ್ಮಿಕ ರೀತಿಯಿಂದ ವಿವರಿಸಿರುವರು. ೧) ಎಲ್ಲ ಅಂತರ್‌ರಾಷ್ಟ್ರೀಯ ಪರಿಷತ್ತುಗಳಲ್ಲಿ ಸೇರಿ ಜಗತ್ತಿನ ಇತರ ರಾಷ್ಟ್ರಗಳ ಕೂಡ ನಿಕಟ ಸಂಪರ್ಕ ಬೆಳಸಿ ಜಾಗತಿಕ ಸ್ವಾತಂತ್ರ್ಯ ಶಾಂತಿಗಳನ್ನು ಪುರಸ್ಕರಿಸುವದು. ೨) ಔದ್ಯೋಗಿಕ ದೃಷ್ಟಿಯಿಂದ ಹಿಂದುಳಿದ ರಾಷ್ಟ್ರಗಳ ಅಭಿವೃದ್ಧಿಗೋಸುಗ ಪ್ರಯತ್ನಿಸುವದು. ೩) ಹಿಂದುಸ್ತಾನದ ಹೊರಗೆ ಇಲ್ಲಿಂದ ಹೆಚ್ಚು ಸರಕುಗಳನ್ನು ಕಳಿಸುವಂತೆ ಹೆಣಗುವದು. ಕೊನೆಯದಾಗಿ ೪) ಸಂರಕ್ಷಕ ಸುಂಕವೇ ಮೊದಲಾದ ಎಲ್ಲ ಪ್ರತ್ಯಕ್ಷ ಅಪ್ರತ್ಯಕ್ಷ ಉಪಾಯಗಳಿಂದ ಪರದೇಶದ ಆಯಾತಗಳನ್ನು ನಿರ್ಬಂಧಿಸಿ ಹಿಂದುಸ್ತಾನದ ಸಾಧನ ಸಂಪತ್ತು ನಾಶವಾಗದಂತೆ ನೋಡಿಕೊಳ್ಳುವದು. ಹಿಂದುಸ್ತಾನದ ವ್ಯಾಪಾರೋದ್ಯಮಗಳು ಬೆಳೆವಂತೆ ನೋಡಿಕೊಳ್ಳುವದು ಅತ್ಯಂತ ಅವಶ್ಯವಾಗಿದೆ. ಅನ್ನ ವಸ್ತ್ರಗಳಲ್ಲಿ ಪ್ರತಿಯೊಂದು ಹಳ್ಳಿ ಸ್ವಯಂಪೂರ್ಣವಾಗುವಂತೆ ನೋಡಿಕೊಳ್ಳಲು ಕಾಂಗ್ರೆಸ್ಸು ಬದ್ಧವಾಗಿದೆ. ಇದಕ್ಕನುಗುಣವಾಗುವಂತೆ ನಡುಗಾಲ ಸರಕಾರದವರು ತಮ್ಮ ವ್ಯಾಪಾರೀ ಧೋರಣ ನಿರ್ಧರಿಸಿದ್ದು ಸಮಂಜಸವಾಗಿದೆ.

## ಮುಡಿಯುವರ ಅನುಚಿತ ಧೋರಣ

ಸಿಂಧದ ಗವರ್ನರರಾದ ಸರ್ ಮುಡಿಯುವರ್ರು ಪ್ರಾಂತದ ಆಡಳಿತದಲ್ಲಿ ಅನುಚಿತ ಧೋರಣ ವಹಿಸಿ ತಮ್ಮ ಹೊಣೆಗಾರಿಕೆಯಲ್ಲಿ ತಪ್ಪುತಿರ್ರುವುದು ವಿಷಾದಕರವಾದ ಸಂಗತಿ. ಸಿಂಧದ ಮಂತ್ರಿಮಂಡಳ ಪಕ್ಷಕ್ಕೆ ಬಹುಮತವಿಲ್ಲೆಂದು ನಿಶ್ಚಿತವಾಗಿದ್ದರೂ ಆ ಪಕ್ಷದವರ ಅಕ್ರಮಗಳಿಗೆಲ್ಲ ಹೂಂಗೊಟ್ಟುತ್ತ ನಡೆದಿರುವರು. ತಮ್ಮ ಪಕ್ಷದ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ಶಾಸನ ಸಭೆಯ ಅಧಿವೇಶನ ನಡೆದು ಅವಿಶ್ವಾಸದ ಗೊತ್ತುವಳಿ ಚರ್ಚಿಸಲ್ಪಟ್ಟರೆ ಅದು ಸ್ವೀಕೃತವಾಗುವುದೆಂದು ಅವರ ಕಡೆಯಿಂದ ರಾಜೀನಾಮೆ ಕೊಡಿಸಿದರು. ಅನಂತರ ವಿರೋಧಿ ಪಕ್ಷದ ಉಪಾಧ್ಯಕ್ಷರ ಅಧ್ಯಕ್ಷತೆಯಲ್ಲಿ ಅಧಿವೇಶನ ನಡೆಯಿತು. ಅದರೆ ಮಂತ್ರಿಮಂಡಳದವರ ಕಾಯಿದೆಗೆ ಯೋಗ್ಯ ಉತ್ತರ ಕೊಡಬೇಕೆಂದು ವಿರೋಧಿ ಪಕ್ಷದವರು ಉಪಾಧ್ಯಕ್ಷರಿಂದ ರಾಜೀನಾಮೆ ಕೊಡಿಸಿದರು. ಈ ಪರಿಸ್ಥಿತಿಯಲ್ಲಿ ಗವರ್ನರ ಸಾಹೇಬರು ಪಕ್ಷ ಪಂಗಡಗಳಿಂದ ಅಲಿಪ್ತ ಉಳಿಯಬೇಕಿದ್ದ ಯುರೋಪಿಯನ್ ಸದಸ್ಯರ ಅಧ್ಯಕ್ಷತೆಯಲ್ಲಿ ಸಭೆ ಸೇರಿಸಿ ಅವಿಶ್ವಾಸದ ಗೊತ್ತುವಳಿಯ ಚರ್ಚೆ ಸಾಗಿಸಬೇಕಿತ್ತು. ಯುರೋಪಿಯನ್ ಸದಸ್ಯರು ಶಾಸನ ಸಭೆಗಳಲ್ಲಿರುವದು ಕೇವಲ ತಮ್ಮ ವಿಶಿಷ್ಟ ಹಕ್ಕುಬಾಧ್ಯತೆಗಳ ರಕ್ಷಣೆಗಾಗಿ ಮಾತ್ರ ಇಲ್ಲಿನ ಪಕ್ಷಪಂಗಡಗಳಲ್ಲಿ ಕೈಹಾಕ ಸಡಿಸಲಿಕ್ಕಾಗಿ ಅಲ್ಲೆಂಬುದು ಸಿರ್ವಿವಾದವಾಗಿದೆ. ಈ ಪರಿಸ್ಥಿತಿಯಲ್ಲಿ ಯುರೋಪಿಯನ್‌ರು ಮಂತ್ರಿಮಂಡಳಕ್ಕೆ ಬೆಂಬಲವನ್ನೇ ಕೊಡಬಾರದಾಗಿತ್ತು. ಬಹಳಾದರೆ ಬಂಗಾಲದ ಯುರೋಪಿಯನ್‌ರಂತೆ ತಾಟಸ್ಥ್ಯ ಧೋರಣ ವಹಿಸಬೇಕಿತ್ತು. ಅದೇನೇ ಇದ್ದರೂ ಗವರ್ನರ ಸಾಹೇಬರು ಅವಿಶ್ವಾಸದ ಗೊತ್ತುವಳಿಯ ಚರ್ಚೆಗೆ ಅವಕಾಶ ಮಾಡಿಕೊಡದೆ ಶಾಸನ ಸಭೆಯನ್ನೇ ವಿಸರ್ಜಿಸಿದು ಅಕ್ರಮವೆಂದು ಹೇಳಬೇಕಾಗುವುದು. ಇನ್ನೊಂದು ಮಹತ್ವದ ಮಾತೆಂದರೆ ಹಿದಾಯತುಲ್ಲಾ ಮಂತ್ರಿಮಂಡಳದಲ್ಲಿಯ ರಾಜೀನಾಮೆ ಕೊಟ್ಟ ನಾಲ್ವರು ಮಂತ್ರಿಗಳನ್ನು ಮತ್ತೆ ನೇಮಿಸಿಕೊಂಡು ಆಡಳಿತ ಅಧಿಕಾರವನ್ನು ಅವರಿಗೆ ಒಪ್ಪಿಸಿದ್ದು. ಅಲ್ಲಿನ ಪಕ್ಷಪಂಗಡಗಳಲ್ಲಿ ಇಷ್ಟೊಂದು ಮತಭೇದವಾದಾಗ ಶಾಸನ ಸಭೆಯಲ್ಲಿ ನಿಚ್ಚಳ ಬಹುಮತವಿಲ್ಲದಿರುವ ಮಂತ್ರಿಮಂಡಳಕ್ಕೇ ಮತ್ತೆ ಜೀವದಾನ ಕೊಟ್ಟು ಅವರ ನೇತೃತ್ವದಲ್ಲಿಯೆ ಶಾಸನ ಸಭೆಗಳ ಚುನಾವಣೆಗಳನ್ನು ನಡೆಸುವದು ಸಮಂಜಸವಲ್ಲ. ಅಂತೆಯೇ ಅಬ್ದುಲ್ ಮಜೀದರು ಇದನ್ನು ಪ್ರತಿಭಟಿಸಿದ್ದಾರೆ. ಮಂತ್ರಿಮಂಡಳದವರ ಬಗ್ಗೆ ಇಷ್ಟೊಂದು ದೂರುಗಳಿರುವಾಗ ಅವರ ನೇತೃತ್ವದಲ್ಲಿಯೆ ಚುನಾವಣೆಗಳನ್ನು ನಡೆಸಿದರೆ ಅವೆಂತು ನಿಷ್ಪಕ್ಷಪಾತತನದಿಂದ ಸಾಗಿಸಬಲ್ಲವು ? ವಿಶೇಷತಃ ಮುಸಲ್ಮಾನರ ಚುನಾವಣೆಗಳಲ್ಲಿ ಲೀಗ ಮತ್ತು ವಿರೋಧಿ ಪಕ್ಷದವರಲ್ಲಿ ವಿಶೇಷ ತುರುಸು ಇದ್ದುದರಿಂದ ಚುನಾವಣೆಗಳು ನಿಷ್ಪಕ್ಷಪಾತದಿಂದ ಸಾಗುವದು ಅತ್ಯವಶ್ಯವಾಗಿದೆ. ಈ ದೃಷ್ಟಿಯಿಂದ ಸರ್ ಮುಡಿಯುವರು ಇನ್ನಾದರೂ ಆಡಳಿತದ ಅಧಿಕಾರವನ್ನು ತಮ್ಮ ಕಡೆಗೆ ತೆಗೆದುಕೊಂಡು ಚುನಾವಣೆಗಳನ್ನು ನಡೆಸಬೇಕೆಂದು ಸೂಚಿಸಬಯಸುತ್ತೇವೆ.

## ಸಂಸ್ಥಾನಪ್ರಜರ ಹಕ್ಕುಬಾಧ್ಯತೆಗಳು

ಸಂಸ್ಥಾನ ಪ್ರಜರ ಹಕ್ಕುಬಾಧ್ಯತೆಗಳನ್ನು ಈ ವರೆಗೆ ಅಲಕ್ಷಿಸುತಿದ್ದ ಸಂಸ್ಥಾನಿಕರಿಗೀಗ ತಮ್ಮ ಕರ್ತವ್ಯದ ಅರಿವಾಗಹತ್ತಿದೆ. ಪ್ರಜರಿಗೆ ಹಕ್ಕುಬಾಧ್ಯತೆಗಳನ್ನು ಕೊಡದಿದ್ದರೆ ತಮ್ಮ ಅಸ್ತಿತ್ವಕ್ಕೇ ಧಾಳಿ ಬರುವದೆಂಬುದರ ಮನವರಿಕೆ ಅವರಿಗಾಗಿದೆ. ಔಂಧದ ಪಂತ ಪ್ರತಿನಿಧಿಗಳು ಎಲ್ಲರಿಗಿಂತ ಮೊದಲು ತಮ್ಮ ಪ್ರಜೆಗಳಿಗೆ ಹಕ್ಕುಬಾಧ್ಯತೆಗಳನ್ನು ಕೊಟ್ಟರು. ಈಗ ಫಲ್ಟಣ ಮೊದಲಾದ ಸಂಸ್ಥಾನಗಳ ಮಹಾರಾಜರೂ ಮುಂದೆ ಬಂದಿದ್ದಾರೆ. ಆದರೂ ಸಂಸ್ಥಾನಿಕರಲ್ಲಿ ಇನ್ನೂ ಸ್ವಾರ್ಥ ಭಾವನೆ ತುಂಬಿದೆ. ತಮ್ಮ ಖಾಸಗಿ ವೆಚ್ಚವನ್ನು ಕಡಮೆ ಮಾಡಿಕೊಳ್ಳಬೇಕೆಂಬ ಪ್ರವೃತ್ತಿಯೂ ಇನ್ನೂ ಅನೇಕರಲ್ಲಿ ಉಂಟಾಗಿಲ್ಲ. ಅಂತೆಯೇ ಸಂಸ್ಥಾನ ಪ್ರಜರು ತಮ್ಮ ಹಕ್ಕುಬಾಧ್ಯತೆಪಡೆಯಲು ಚಳವಳಿ ಹೂಡಬೇಕಾಗುತ್ತದೆ. ಘಟನಾ ಸಮಿತಿಯು ಬ್ರಿಟಿಶ್ ಹಿಂದುಸ್ತಾನದ ಪ್ರತಿನಿಧಿಗಳೆಲ್ಲ ಲೋಕನಿಯುಕ್ತರೇ ಇದ್ದರೂ ಸಂಸ್ಥಾನಿಕರು ಮಾತ್ರ ತಮ್ಮ ಕೈಗೊಂಬೆಗಳನ್ನು ಘಟನಾ ಸಮಿತಿಯ ಸದಸ್ಯರನ್ನಾಗಿ ನೇಮಿಸಲು ಮುಂದಾಗಿರುವರು. ಸಂಘಾನ ಸಮಿತಿಯಲ್ಲಿ ಸಂಸ್ಥಾನ ಪ್ರಜರಿಗೆ ಹಕ್ಕುಬಾಧ್ಯತೆಯಿಲ್ಲ. ಈಗೇನೋ ಸಣ್ಣ ಸಣ್ಣ ಸಂಸ್ಥಾನಿಕರು ಒಕ್ಕೂಟ ಮಾಡಿಕೊಳ್ಳಲು ಹವಣಿಸುತಿರುವರು. ಆದರೆ ಸಂಸ್ಥಾನಗಳಲ್ಲಿ ಹೊಣೆಗಾರ ರಾಜ್ಯ ಪ್ರಾರಂಭಿಸದೆ ಸಂಸ್ಥಾನಿಕರು ಒಕ್ಕೂಟ ಮಾಡಿಕೊಳ್ಳಬಾರದೆಂದು ಪಂಡಿತ ಜವಾಹರಲಾಲರು ಸಂಸ್ಥಾನಿಕರಿಗೆ ಸದುಪದೇಶ ಮಾಡಿದ್ದಾರೆ. ಸಂಸ್ಥಾನಿಕರು ಪರಿಸ್ಥಿತಿಯ ಮಹತ್ವವನ್ನರಿತು ಪ್ರಜೆಗಳ ಹಕ್ಕುಬಾಧ್ಯತೆಗಳನ್ನು ಕೊಡಲು ಮುಂದಾಗಬೇಕೆಂದು ಆಗ್ರಹಪಡಿಸುತ್ತೇವೆ.

## ಮುಂಬಯಿ ಶಾಸನ ಸಭೆ

# ಪೋಲೀಸ ಕಾಯಿದೆ ತಿದ್ದುಪಡಿ, ಬಹುಪತ್ನೀತ್ವ ಪ್ರತಿಬಂಧ, ಮಾರಾಟಕರ ತಿದ್ದುಪಡಿ ಮಸೂದೆಗಳು ಪಾಸಾದವು— ಲೀಗ ಸಭಾಸದರ ತೀಕ್ಷ್ಣ ಟೀಕೆ

ಮುಂಬಯಿ ಶಾಸನ ಸಭೆಯಲ್ಲಿ ಈ ವಾರ ಮುಂಬಯಿ ಜಿಲ್ಹಾ ಪೋಲೀಸ ಕಾಯಿದೆ, ಮುಂಬಯಿ ನಗರ ಪೋಲೀಸ ಕಾಯಿದೆ ಇವೆರಡರ ತಿದ್ದುಪಡಿ ಮಸೂದೆಗಳು ಬಹಳ ಚರ್ಚೆಯ ನಂತರ ಪ್ರಚಂಡ ಬಹುಮತದಿಂದ ಸ್ವೀಕರಿಸಲ್ಪಟ್ಟವು. ಇವಲ್ಲದೆ ಮಾರಾಟಕರ ತಿದ್ದುಪಡಿ ಮಸೂದೆ ಹಾಗು ಬಹುಪತ್ನೀತ್ವ ಪ್ರತಿಬಂಧಕ ಮಸೂದೆಯೂ ಸ್ವೀಕರಿಸಲ್ಪಟ್ಟು ಹರಿಜನರ ಸಾಮಾಜಿಕ ಅಪಾತ್ರತೆಗಳ ನಿರ್ಮೂಲನ ಮಸೂದೆಯ ಪ್ರಥಮ ವಾಚನ ಮುಗಿದಿದೆ.

### ಪೋಲೀಸ ಮಸೂದೆಯ ಮೇಲೆ ಬಾಣ

ಪ್ರಾಂತದಲ್ಲೆಲ್ಲ ಹಬ್ಬಿರುವ ಸಾಮೂಹಿಕ ಅತ್ಯಾಚಾರಗಳನ್ನು ಹತ್ತಿಕ್ಕುವ ಸಲುವಾಗಿ ಪೋಲೀಸರಿಗೆ ಹೆಚ್ಚಿನ ಅಧಿಕಾರ ಕೊಡಲೆಂದು ಸರಕಾರದವರು ಜಿಲ್ಹಾ ಮತ್ತು ನಗರ ಪೋಲಿಸ ಕಾಯಿದೆಗಳನ್ನು ತಿದ್ದುಪಡಿ ಮಾಡುವ ಮಸೂದೆಗಳನ್ನು ಪಾಸು ಮಾಡಿಸಿಕೊಳ್ಳಲು ಆತುರಪಡುತಿದ್ದರು. ಆದರೆ ವಿರೋಧಿ ಪಕ್ಷದ ವಿವಿಧ ಗುಂಪುಗಳು—ಲೀಗ್, ಕಮ್ಯುನಿಸ್ಟ್, ಹಿಂದೂ ಸಭಾ, ಕ್ರೈಸ್ತ, ಜಮೀನದಾರ ಇತ್ಯಾದಿ— ಮಸೂದೆ ಪಾಸಾಗುವದನ್ನು ತಡೆಯುವ ಶಕ್ತಿ ತಮ್ಮಲ್ಲಿಲ್ಲದಿದ್ದರೂ ಶಾಸನ ಸಭಾ ನಿಬಂಧನೆಗಳ ಪೂರ್ಣ ಉಪಯೋಗ ಮಾಡಿ ಕಾಲಹರಣ ಮಾಡಲು ಪ್ರಯತ್ನಿಸಿದರು. ನೂರಾರು ತಿದ್ದುಪಡಿಗಳನ್ನು ಮಂಡಿಸಿ ಪ್ರತಿಯೊಂದರ ಮೇಲೂ ಉದ್ದುದ್ದ ಭಾಷಣಗಳನ್ನು ಅವರು ಮಾಡಿದರು. ಈ ಯುಕ್ತಿಯಿಂದ ಕಾಲಹರಣವಾಗುತಿರುವದನ್ನು ನೋಡಿ ಇದೇ ಅಧಿವೇಶನದಲ್ಲಿ ಅಂದರೆ ದೀಪಾವಳಿಯ ಮೊದಲು ಇನ್ನೂ ಅನೇಕ ಕಾರ್ಯಗಳನ್ನು ಸಭೆ ಪೂರೈಸಬೇಕಾಗಿರುವದರಿಂದ ಮತ್ತೆ ಮತ್ತೆ ಅವೇ ಮುದ್ದೆಗಳ ಮೇಲೆ ಮಾತಾಡಿ ಸದಸ್ಯರು ಸಭೆಯ ಸಮಯವನ್ನು ಅಪವ್ಯಯಗೊಳಿಸದಂತೆ ನೋಡಿಕೊಳ್ಳಬೇಕೆಂದು ಸಭೆಯ ಧುರೀಣರು ಅಧ್ಯಕ್ಷರನ್ನು ಪ್ರಾರ್ಥಿಸಿಕೊಳ್ಳಬೇಕಾಯಿತು.

ವಿರೋಧ ಪಕ್ಷದ, ಮುಖ್ಯವಾಗಿ ಲೀಗ್ ಪಕ್ಷದ ತಿದ್ದುಪಡಿಗಳು ಪೋಲೀಸರ ಅಧಿಕಾರಕ್ಕೆ ಕತ್ತರಿಹಾಕುವ ಉದ್ದೇಶವನ್ನಿಟ್ಟುಕೊಂಡಿದ್ದರೆ ಅವರ ಭಾಷಣಗಳು ಸರಕಾರದ ಮೇಲೆ ವಿಷ ಕಾರುವ ಪರಿಪಾಠವನ್ನು ಇಟ್ಟುಕೊಂಡಿದ್ದವು. ಇದು ಕರಾಳ ಶಾಸನವೆಂದು ಕಮ್ಯುನಿಸ್ಟ ಸದಸ್ಯರು ದೂರಿಕೊಂಡರೆ ಲೀಗ ಸದಸ್ಯರು ನಾಗರಿಕ ಸ್ವಾತಂತ್ರ್ಯವನ್ನು ಎತ್ತಿಹಿಡಿಯುವವರಂತೆ ರಾಜಕೀಯ ವಿರೋಧದ ಹುಟ್ಟಡಗಿಸಲು ಕಾಂಗ್ರೆಸ್ ಸರಕಾರ ಇದನ್ನು ತರುತಿದೆಯೆಂದರು. ಗಂಡಾಂತರದ ಪರಿಸ್ಥಿತಿಯನ್ನು ಸಾರುವದು, ಸಮಾಜವೈರಿ ಸತ್ವಗಳನ್ನು ಗಡಿಪಾರು ಮಾಡುವದು ಮುಂತಾದ ಕಲಮುಗಳಿಗೆ ಅನೇಕಾನೇಕ ಉಪಸೂಚನೆಗಳು ಬಂದವು. ಗಡಿಪಾರಿನ ಆಜ್ಞೆಗೊಳಗಾದವನಿಗೆ ನ್ಯಾಯಸ್ಥಾನದಲ್ಲಿ ಅಪೀಲು ಮಾಡಲು ಅವಕಾಶವಿರಬೇಕು ಇತ್ಯಾದಿ ಅವುಗಳ ಆಶಯವಾಗಿತ್ತು. ಅಹಮದ ಪಟೇಲರು (ಲೀಗ) ಕಾಂಗ್ರೆಸ್ಸು ಪ್ರಾಂತದ ಮೂಲೆಮೂಲೆಯಲ್ಲಿಯೂ ಪೋಲೀಸ ಅಧಿಕಾರಿಗಳ ರೂಪದಲ್ಲಿ ಹಿಟ್ಲರರನ್ನು ಸೃಜಿಸಬಯಸುತಿದೆಯೆಂದರು. ಹಿಟ್ಲರನೂ ರಾಯಕಸ್ಟಾಗದಿಂದ ಮೊದಲು ಇಂಥ ಕಾಯಿದೆಗೆ ಸಮ್ಮತಿ ಪಡೆದು ಅದರ ಬಲದಿಂದ ಆ ಮೇಲೆ ವಿರೋಧಿಗಳನ್ನು ಹಣಿದನೆಂದು ಛಾಯೀಜಿ (ಲೀಗ) ಯವರು ಹೇಳಿದರು. ಮಸೂದೆ ಪಾಸಾದರೆ ಇಡೀ ಪ್ರಾಂತವೇ ಪೋಲೀಸ ರಾಜ್ಯವಾಗಿ ಪರಿಣಮಿಸುವದೆಂದು ಎಫ್. ಡಿ. ಜಮೀನದಾರರು ಭಯಪಟ್ಟರು.

### ಸಭಾತ್ಯಾಗ

ಕಾಯದೆ ಮಂತ್ರಿ ದಿನಕರರಾವ ದೇಸಾಯರು ಟೀಕೆಗಳಿಗೆಲ್ಲ ಸಮರ್ಪಕವಾದ ಉತ್ತರವಿತ್ತರು. ಪುಂಡರನ್ನು ನಿಯಂತ್ರಿಸದಿದ್ದರೆ ನಾಗರಿಕ ಜೀವನವೇ ಅಸಾಧ್ಯವಾಗುವದು. ಕ್ರಮಬದ್ಧ ಚಟುವಟಿಕೆಗಳಲ್ಲಿ ಪ್ರಸಕ್ತರಾದ ಶಾಂತ ನಾಗರಿಕರ ಹಕ್ಕುಗಳಲ್ಲಿ ಪ್ರವೇಶಿಸುವದು ಸರಕಾರದ ಉದ್ದೇಶವಲ್ಲ. ಆದರೆ ಪುಂಡರು ಈ ಹಕ್ಕುಗಳ ದುರುಪಯೋಗ ಮಾಡಿ ಸಮಾಜಕ್ಕೆ ವಿಘಾತಕವಾಗಿ ವರ್ತಿಸುವದನ್ನು ಹತ್ತಿಕ್ಕಲು ಇದು ಅವಶ್ಯವಾಗಿದೆ. ಸದ್ಯದ ಪರಿಸ್ಥಿತಿಯನ್ನು ನೋಡಿದರೆ ಈ ಮಸೂದೆ ಸೌಮ್ಯವೆ ಇದೆಯೆನ್ನಬೇಕು. ಸಾಮಾನ್ಯ ನಾಗರಿಕನು ಇದರ ಕಲಮುಗಳಿಗೆ ಹೆದರಬೇಕಾಗಿಲ್ಲ. ಶಾಸನಬದ್ಧ ರಾಜಕೀಯ ಚಟುವಟಿಕೆಗೂ ಇದರಿಂದ ಧಕ್ಕೆಯಾಗದು. ನ್ಯಾಯಸ್ಥಾನದಲ್ಲಿ ಅಪೀಲಿಗೆ ಅವಕಾಶ ಕೊಟ್ಟರೆ ವ್ಯರ್ಥ ವಿಲಂಬವಾಗಿ ಮಸೂದೆಯ ಉದ್ದೇಶವೇ ನಿರರ್ಥಕವಾಗುವದು ಎಂದು ಮುಂತಾಗಿ ಅವರು ವಿವಿಧ ಕಲಮುಗಳ ಮೇಲಿನ ಟೀಕೆಗಳನ್ನು ತುಂಡರಿಸಿದರು. ಉಪಸೂಚನೆಗಳೆಲ್ಲ ತಿರಸ್ಕರಿಸಲ್ಪಟ್ಟವು.

ತಾ. ೨೨ ಕ್ಕೆ ಮಸೂದೆಯ ತೃತೀಯ ವಾಚನ ಮಂಡಿಸಲ್ಪಟ್ಟಾಗ, ಪೋಲೀಸರಿಗೆ ಮಿತಿಮೀರಿದ ಅಧಿಕಾರ ಕೊಡುವ ಈ ಕರಾಳ ಮಸೂದೆಯ ಕುಂದುಕೊರತೆಗಳನ್ನು ಕಡಿಮೆ ಮಾಡಲು ತಾವು ಪ್ರಯತ್ನಿಸಿದರೂ ತಿದ್ದುಪಡಿಗಳನ್ನೆಲ್ಲ ಸರಕಾರ ನಿರಾಕರಿಸಿದ್ದನ್ನು ನಿಷೇಧಿಸಲು ಲೀಗ ಸಭಾಸದರೆಲ್ಲ ಎದ್ದು ಗುಂಪಾಗಿ ಸಭಾತ್ಯಾಗ ಮಾಡಿದರು. ಅವರ ವರ್ತನೆಗೆ ಗೃಹಮಂತ್ರಿ ಮುರಾರಜಿಯವರು ವಿಷಾದವನ್ನು ವ್ಯಕ್ತಗೊಳಿಸಿ ವಿರೋಧ ಪಕ್ಷದವರು ಸರಕಾರದ ವಿರುದ್ಧ ಅಪಪ್ರಚಾರವನ್ನು ಸಾಗಿಸಿರುವರೆಂದೂ ಒಂದಲ್ಲೊಂದು ದಿನ ಇದು ಬಯಲಿಗೆ ಬಂದು ಅವರಿಗೇ ಅದು ಮುಳುವಾಗದಿರದೆಂದೂ ಎಚ್ಚರಿಸಿದರು.

ಮಸೂದೆಯ ಮೂರನೆ ವಾಚನ ಪಾಸಾಯಿತು.

ಮುಂಬಯಿ ನಗರ ಪೋಲೀಸ ಕಾಯಿದೆ ತಿದ್ದುಪಡಿ ಮಸೂದೆಯಾದರೂ ಮೇಲಿನ ಮಸೂದೆಯಂಥದೇ ಇದ್ದು ಅದು ತಾ ೨೪ ಕ್ಕೆ ಮೂರನೆ ವಾಚನದಲ್ಲಿ ತೇರ್ಗಡೆ ಹೊಂದಿತು. ಲೀಗ್ ಸದಸ್ಯರು ಸಭಾತ್ಯಾಗಾಂಕವನ್ನು ಈ ಸಂದರ್ಭದಲ್ಲಿಯೂ ಆಡಿ ತೋರಿಸಿದರು.

### ಮಾರಾಟಕರ ತಿದ್ದುಪಡಿ

ತಾ. ೨೪ ಕ್ಕೆ ಹಣಕಾಸಿನ ಮಂತ್ರಿ ವೈಕುಂಠಲಾಲ ಮೆಹತಾ ಅವರು "ಅತಿ ಚಿಕ್ಕ ಮತ್ತು ಬಹಳ ಸವಿಯಾದ ಮಸೂದೆ"ಯೆನಿಸಿದ ಮಾರಾಟಕರ ತಿದ್ದುಪಡಿ ಮಸೂದೆಯನ್ನು ಮಂಡಿಸಿದರು. ಮಾರಾಟಕರ ಬೀಳುವ ವಾರ್ಷಿಕ ಹುಟ್ಟುವಳಿಯ ಕನಿಷ್ಠ ಪ್ರಮಾಣವನ್ನು ಈ ಮಸೂದೆಯ ಮೂಲಕ ೧೦೦೦೦ ದಿಂದ ೩೦೦೦೦ ಕ್ಕೆ ಏರಿಸಲಾಯಿತು. ಶ್ರೀ ಅಂಗಡಿ ಪಣ್ಯಾಭಿಪ್ಪನವರು ಇದಕ್ಕೆ ಹೃತ್ಪೂರ್ವಕ ಬೆಂಬಲವಿತ್ತರು. ಮಿರ್ಜಾ ಅಖ್ತಾರರು (ಲೀಗ್) ಕನಿಷ್ಠವನ್ನು ೧ ಲಕ್ಷಕ್ಕೇರಿಸಬೇಕೆಂದು ಉಪಸೂಚನೆ ತಂದು ಮುಂದೆ ಅದನ್ನು ಹಿಂತೆಗೆದುಕೊಂಡರು. ಕಮ್ಯುನಿಸ್ಟ್ ಡಾಂಗೆಯವರು ಸ್ಟಾಕ್ ಎಕ್ಸಚೇಂಜದ ವ್ಯವಹಾರದ ಮೇಲೂ ಕರಹಾಕಬೇಕು ಉದ್ಯೋಗಗಳ ರಾಷ್ಟ್ರೀಕರಣವಾಗಬೇಕು ಅದರಿಂದ ರಾಷ್ಟ್ರನಿರ್ಮಾಣ ಕಾರ್ಯಕ್ಕೆ ಬೇಕಷ್ಟು ಹಣ ದೊರೆಯಬಹುದೆಂದರು. ಅರ್ಥಸಚಿವ ಮೆಹತಾ ಅವರು ರಾಷ್ಟ್ರೀಕರಣ ಬೇಗನೆ ಆಗುವದೆಂದೂ ಸ್ಟಾಕ್ ಎಕ್ಸಚೇಂಜದ ಮೇಲಿನ ಕರದ ಪ್ರಶ್ನೆ ಸರಕಾರದ ಪರಿಶೀಲನೆಯಲ್ಲಿದೆಯೆಂದೂ ತಿಳಿಸಿದ್ದಲ್ಲದೆ ವೃತ್ತಪತ್ರಗಳನ್ನೂ ಧಾರ್ಮಿಕ ಪುಸ್ತಕಗಳನ್ನೂ ಈ ಕರದ ಕಕ್ಷೆಯಿಂದ ಹೊರಗಿರಿಸಲ್ಪಡಬಹುದೆಂದು ತಿಳಿಸಿದರು.

ಮಸೂದೆಯ ಮೂರೂ ವಾಚನಗಳು ಅಂದೇ ಮುಗಿದವು.

### ಬಹುಪತ್ನೀತ್ವ ಪ್ರತಿಬಂಧ

ತಾ. ೨೪ ಕ್ಕೆ ಪಾಸಾದ ಇನ್ನೊಂದು ಮಸೂದೆಯೆಂದರೆ ಬಹುಪತ್ನೀತ್ವ ಪ್ರತಿಬಂಧ ಮಸೂದೆ. ಸೀಖ, ಜೈನ, ಬೌದ್ಧ, ಆರ್ಯಸಮಾಜ, ಬ್ರಹ್ಮಸಮಾಜ ಅನುಯಾಯಿಗಳು ಮತ್ತು ಹಿಂದೂ ಧರ್ಮಕ್ಕೆ ಮತಾಂತರ ಹೊಂದಿದವರನ್ನೊಳಗೊಂಡ ಸಮಸ್ತ ಹಿಂದುಗಳಿಗೆ ಅನ್ವಯಿಸುವ ಬಹುಪತ್ನೀತ್ವ ಪ್ರತಿಬಂಧ ಮಸೂದೆಯ ಮೂರೂ ವಾಚನಗಳು ಅಂದು ಮುಗಿದು ಹೋದವು. ಶ್ರೀ ಚಕ್ರನಾರಾಯಣರ ಕೆಲವು ಉಪಸೂಚನೆಗಳನ್ನು ಸ್ವೀಕರಿಸಲಾಯಿತು. ಈ ಕಾಯದೆ ಗ್ಯಾಜಿಟದಲ್ಲಿ ಪ್ರಸಿದ್ಧವಾದೊಡನೆ ಜಾರಿಗೆ ಬರುವದು ಮತ್ತು ಮುಂಬೈ ಪ್ರಾಂತದಲ್ಲಿ ಒಬ್ಬನಿಗೆ ಏಕಕಾಲದಲ್ಲಿ ಒಬ್ಬಳಿಗಿಂತ ಹೆಚ್ಚು ಹೆಂಡಂದಿರಿರುವದನ್ನು ಪ್ರತಿಬಂಧಿಸಿ ಅಂಥ ವಿವಾಹವನ್ನು ಅಕ್ರಮಗೊಳಿಸುತ್ತದಲ್ಲದೆ ವಧೂವರರಲ್ಲಿ ಯಾರಾದರೂ ಮುಂಬಯಿ ಪ್ರಾಂತದಲ್ಲಿ ವಾಸಿಸುವವರಾಗಿದ್ದರೆ ಅಂಥವರ ವಿವಾಹವನ್ನು ಅದು ಈ ಪ್ರಾಂತದ ಹೊರಗೆ ಆಗಿದ್ದರೂ ಈ ಕಾಯಿದೆಗೆ ವಿರುದ್ಧವಾಗಿದ್ದರೆ ಅಕ್ರಮವಾಗಿ ಮಾಡುತ್ತದೆ. ೧೯೩೮ ರಲ್ಲಿ ಈ ಮಸೂದೆಯನ್ನು ತಂದು ಈ ವರೆಗೂ ಅದಕ್ಕೆ ಅಂಟಿಕೊಂಡ ಶ್ರೀಮತಿ ಲೀಲಾವತಿ ಮುನಶಿಯವರನ್ನು ಗೃಹಮಂತ್ರಿಗಳು ಅಭಿನಂದಿಸಿದರು. ವಿವಾಹ ವಿಚ್ಛೇದ ಮಸೂದೆಯೂ ಬೇಗನೆ ಸಭೆಯ ಮುಂದೆ ಬರಲಿರುವದೆಂದು ಅವರು ತಿಳಿಸಿದರು.

### "ಹರಿಜನರ ತಾಮ್ರಪಟ"

ತಾ. ೧೫ ಕ್ಕೆ ಶಾಸನ ಸಭೆಯಲ್ಲಿ ಹರಿಜನರ ಕೆಲ ಸಾಮಾಜಿಕ ಅಪಾತ್ರತೆಗಳನ್ನು ಹೋಗಲಾಡಿಸುವ ಸಲುವಾಗಿ ಸಿದ್ಧವಾದ ಮಸೂದೆಯ ಮೊದಲನೆ ವಾಚನ ಪ್ರಾರಂಭವಾಗಿ ಅದೇ ದಿನ ಮುಗಿಯಿತು. ಹರಿಜನೋದ್ಧಾರಕರಾದ ಶ್ರೀ ತಪಾಸೆಯವರು ಇದನ್ನು ಮಂಡಿಸುತ್ತ "ಇದೊಂದು ಹರಿಜನರ ತಾಮ್ರಪಟ"ವೆಂದು ಸಾರಿದರು. ಕರ್ನಾಟಕ ಪ್ರತಿನಿಧಿಗಳಾದ ಶ್ರೀ ಬಾಬು ಹುಜರೆ, ಶ್ರೀಮತಿ ಯಲ್ಲವ್ವಾ ಸಾಂಬ್ರಾಣಿ, ಶ್ರೀ ಚನಬಸಪ್ಪಾ ಅಂಬಲಿ ಮೊದಲಾದವರು ಕನ್ನಡದಲ್ಲಿ ಮಾತಾಡಿ ಇದಕ್ಕೆ ಬೆಂಬಲವಿತ್ತರು. ಮಸೂದೆಯನ್ನು ಯಾರೊಬ್ಬನೂ ವಿರೋಧಿಸಲಿಲ್ಲ. ಬ್ಯಾರಿಸ್ಟರ ಮಾನೆಯವರು ಮಾತ್ರ ಈ ಮಸೂದೆಯಿಂದ ಹರಿಜನರಿಗೆ ಅವಶ್ಯವಿರುವಷ್ಟು ಉಪಕಾರವಾಗುವದಿಲ್ಲೆಂದೂ ಅವರ ಆರ್ಥಿಕ ಪರಿಸ್ಥಿತಿ ಸುಧಾರಿಸಿದ ಹೊರತು ನೂರಕ್ಕೆ ತೊಂಭತ್ತು ಹಕ್ಕುಗಳನ್ನು ಉಪಯೋಗಿಸಲು ಅವರು ಅಸಮರ್ಥರಾಗುವರೆಂದೂ ಹೇಳಿದರು. ಈ ಮಸೂದೆಯನ್ವಯ ಹರಿಜನರು ಸಾರ್ವಜನಿಕ ಪ್ರದೇಶಗಳಿಗೆ ಹಾಗು ಸಿನಿಮಾ ಗೃಹ ಮೊದಲಾದ ಮನೋರಂಜನ ಪ್ರದೇಶಗಳಿಗೆ ಹೋಗಬಹುದು. ಈ ಕಾಯದೆಯನ್ನು ಉಲ್ಲಂಘಿಸಿ ಅವರಿಗೆ ಪ್ರತಿಬಂಧ ಮಾಡುವವರಿಗೆ ಭಯಂಕರ ಶಿಕ್ಷೆ ವಿಧಿಸಲ್ಪಡುವದು.

ಸಭೆಯಿನ್ನೂ ಸಾಗಿದೆ.

# ಲೀಗು ಘಟನಾ ಸಮಿತಿಯಲ್ಲಿ ಪ್ರವೇಶಿಸಬಹುದು

## ನಡುಗಾಲ ಸರಕಾರದಲ್ಲಿ ಸೇರುವ ಸಂಭವ ಕಡಿಮೆ ರಶಿಯೂವನ್ನು ಒಡೆದುಕೊಳ್ಳಲು ಹಾರೂನರ ಪ್ರಯತ್ನ

### ಜಿನ್ನಾ—ವಾಯಿಸರಾಯ ಭೆಟ್ಟಿ

ಈಗ ಅನೇಕ ದಿನಗಳಿಂದ ದಿಲ್ಲಿಯಲ್ಲಿ ಜಿನ್ನಾ ಸಾಹೇಬರೂ ಅವರ ಸಂಗಡಿಗರೂ ದಿಲ್ಲಿಯಲ್ಲಿ ತಳವೂರಿ ಮುಸ್ಲಿಂ ಲೀಗಿನ ಮುಂದೆ ನಿಂತಿರುವ ಅನೇಕ ಸಮಸ್ಯೆಗಳ ಚಿಂತನೆಯನ್ನು ಮಾಡುತಿದ್ದಾರೆ. ವಾಯಿಸರಾಯರೊಡನೆಯೂ ಅವರು ಪತ್ರವ್ಯವಹಾರ ನಡೆಸಿದ್ದಾರೆಂಬಲ್ಲಿ ಏನೂ ಸಂದೇಹವಿಲ್ಲ. ಒಂದು ವಾರಕ್ಕೂ ಹಿಂದೆ ಅವರು ವ್ಹಾಯಿಸರಾಯರ ಭೆಟ್ಟಿ ತೆಗೆದುಕೊಂಡವರು ಮತ್ತೆ ಮೊನ್ನೆ ಬುಧವಾರ ಅವರನ್ನು ಎರಡನೆ ಬಾರಿ ಕಂಡರು. ಈ ಬಾರಿಯ ಭೆಟ್ಟಿ ೧೦೫ ನಿಮಿಷಗಳ ವರೆಗೆ ನಡೆಯಿತು. ಆದರೂ ಮಾತುಕತೆಗಳು ಇನ್ನೂ ನಿಶ್ಚಯಾತ್ಮಕ ಘಟ್ಟವನ್ನು ಮುಟ್ಟಿಲ್ಲ. ಜಿನ್ನಾರು ಕೆಲದಿನ ಬಿಟ್ಟು ಮತ್ತೆ ವಾಯಿಸರಾಯರನ್ನು ಕಾಣಬಹುದು. ಇದಲ್ಲದೆ ಘಟನಾ ಸಮಿತಿಯ ಸಲಹೆಗಾರರಾದ ಸರ್. ಬಿ. ಎನ್. ರಾಯರೊಡನೆಯೂ ಜಿನ್ನಾರ ಭೆಟ್ಟಿ ಪತ್ರವ್ಯವಹಾರಗಳು ಎಡಬಿಡದೆ ನಡೆದಿವೆ. ಆದರೆ ಇದೆಲ್ಲದರ ಫಲವೆಂತಾಗಿದೆಯೆಂಬುದು ಇನ್ನೂ ಊಹಾಪೋಹದ ವಸ್ತುವಾಗಿಯೆ ಉಳಿದಿದೆ. ಜಿನ್ನಾ-ವೇವೆಲ ಭೆಟ್ಟಿ "ಸೌಹಾರ್ದದ ವಾತಾವರಣ"ದಲ್ಲಿ ಜರಗಿತೆಂದು ಮಾತ್ರ ಹೇಳಲಾಗಿದೆ.

ಜಿನ್ನಾ ಸಾಹೇಬರನ್ನು ಇಂದು ಕಠಿನ ಸಮಸ್ಯೆ ಎದುರಿಸಿದೆಯೆಂದು ಧಾರಾಳವಾಗಿ ಹೇಳಬಹುದು. ಅದಕ್ಕಿಂತಲೂ ಕೆಡುಕಿನ ಸಂಗತಿಯೆಂದರೆ ಆ ಸಮಸ್ಯೆ ಅವರದೇ ಸೃಷ್ಟಿಯಾಗಿದೆ. ಪ್ರತ್ಯಕ್ಷ ಹೋರಾಟದ ಬೆದರಿಕೆ, ಜಾತೀಯ ಗಲಭೆಗಳ ಪ್ರತಾಪ ಮೊದಲಾದವುಗಳಿಂದ ಬ್ರಿಟಿಶರಾಗಲಿ ಅಧಿಕಾರ ಪಂಡಕ್ಕೆ ಕೈಹಚ್ಚಿದ ಕಾಂಗ್ರೆಸ್ ನಾಯಕರಾಗಲಿ ಸೊಪ್ಪು ಹೊಕುವ ಲಕ್ಷಣವಿಲ್ಲೆಂಬು ಸ್ಪಷ್ಟವಾಗಿದೆ. ಕಾಂಗ್ರೆಸ್ ನಾಯಕರು ಆಡಳಿತದ ಕೆಲಸದಲ್ಲಿ ಆಸ್ಥೆಯಿಂದಲೂ ದೃಢಹಸ್ತದಿಂದಲೂ ಪ್ರವೇಶಿಸಿದ್ದಾರೆ. ಒಮ್ಮೆ ಗಾದಿಯನ್ನೇರಿದರೆಂದರೆ ಕಾಂಗ್ರೆಸ್ಸಿಗರೂ ಹಳೆಯ ಕೆಸರಲ್ಲಿ ಕಾಲುಕೋದುಹೋಗುವರೆಂದು ಅಧಿಕಾರಿಗಳು ಆಶಿಸಿದ್ದು ವ್ಯರ್ಥವಾಗಿದೆ. ಸರಕಾರಿ ಆಡಳಿತೆಯಲ್ಲಿ ಅವರು ಕ್ರಾಂತಿಮಾಡಲು ಕಂಕಣ ಕಟ್ಟಿದ್ದಾರೆಂದು ಎಲ್ಲರಿಗೂ ಮನವರಿಕೆಯಾಗಿ ಹೋಗಿದೆ. ಹೀಗೇ ಕೆಲಕಾಲ ಮುಂದೆ ಸಾಗಿದರೆ ಮುಸ್ಲಿಂ ಲೀಗಿನ ಬೆದರಿಕೆಯ ಬಿಸಿ ಆರಿಹೋಗಬಹುದೆಂದು ಜಿನ್ನಾರಿಗೂ ಅನಿಸತೊಡಗಿದೆ. ಮೇಲಾಗಿ ಅವರ ಶ್ರೀಮಂತ ಬೆಂಬಲಿಗರಿಗೆ ಪ್ರತ್ಯಕ್ಷ ಹೋರಾಟದ ಆತುರ ಅಷ್ಟು ಇಲ್ಲದಾಗಿದೆ. ಮುಸ್ಲಿಂ ಲೀಗಿಗಾಗಿ ಕೇಂದ್ರ ಮಂತ್ರಿಮಂಡಲದಲ್ಲಿ ತೆರವಾಗಿರುವ ೫ ಸ್ಥಾನಗಳನ್ನು ಬೇಗನೆ ತುಂಬಿ ಸರಕಾರದಲ್ಲಿ ಭಾಗವಹಿಸಬೇಕೆಂದು ಅವರು ಒತ್ತಾಯಗೊಳಿಸುತಿದ್ದಾರೆ. ಆದರೆ ಹೋರಾಟದ ದಾರಿಯಲ್ಲಿ ಇಷ್ಟು ದೂರ ಮುಂದುವರಿದ ಮೇಲೆ ಹಠಾತ್ತಾಗಿ ತಿರುಗಿ ಬರುವದು ಕಠಿನ ಕೆಲಸ. ರಾಷ್ಟ್ರೀಯ ಮುಸ್ಲಿಮನ ಸೇರ್ಪಡೆ, ನೆಹರೂ ಸರಕಾರ ಹೊಸತಾಗಿ ಪ್ರಾರಂಭಿಸಿದ ಸಂಪ್ರದಾಯಗಳು, ಜಾತೀಯ ಪ್ರಶ್ನೆಗಳ ತೀರ್ಮಾನದಲ್ಲಿ ಮುಸ್ಲಿಂ ಲೀಗಿನ ವಿಶೇಷಾಧಿಕಾರ ಮೊದಲಾದ ಸಂಗತಿಗಳಲ್ಲಿ ಯಥಾಸ್ಥಿತಿ ಅವಸ್ಥೆಗೆ ಒಪ್ಪಿಗೆ ಕೊಡುವದರಿಂದ ಜಿನ್ನಾರ ಗೌರವ ಮುಸ್ಲಿಂ ಜನತೆಯ ದೃಷ್ಟಿಯಲ್ಲಿ ಇಳಿಯಬಹುದು. ಆದುದರಿಂದ ಇಷ್ಟೆಲ್ಲ ಮಾತುಕತೆಗಳಿಂದ ಜಿನ್ನಾರು ಮುಸ್ಲಿಂ ಲೀಗಿಗೆ ಘಟನಾ ಸಮಿತಿಯಲ್ಲಿ ಭಾಗವಹಿಸಲು ಸಲಹೆ ಕೊಡಬಹುದು ಹೊರತು ನಡುಗಾಲ ಸರಕಾರದಲ್ಲಿ ಪ್ರವೇಶಿಸಲು ಅವರು ಸಮ್ಮತಿಸಲಾರರೆಂದು ಬಲ್ಲವರು ಊಹಿಸುತ್ತಾರೆ.

### ನೆಹರೂ ಅವರ ಹೇಳಿಕೆ

ಘಟನಾ ಸಮಿತಿಯ "ವಿಭಾಗ" ಮತ್ತು

—೧೩ನೇ ಪುಟಕ್ಕೆ



### ಚರ್ಚಿಲ್ಲರ ಹೊಸ ಯೋಜನೆ

ಇಂಗ್ಲಂಡಿನ "ಶಾಪಗ್ರಸ್ತ ದೇವತೆ" ಯಾದ ಚರ್ಚಿಲ್ಲರ ತಲೆಯಲ್ಲಿ, ಜಗತ್ತಿನ ಉದ್ಧಾರಕ್ಕಾಗಿ ಅದರಲ್ಲಿಯೂ ಯುರೋಪಿಯನ್ ಸಂಸ್ಕೃತಿಯ ಸಂರಕ್ಷಣೆಗಾಗಿ, ಹೊಸ ಹೊಸ ಯೋಜನೆಗಳು ಹುಟ್ಟುತ್ತಲೆ ಇವೆ. ಕೆಲ ತಿಂಗಳ ಹಿಂದೆ ಅಮೇರಿಕೆಯ ಫುಲ್ಟನ್ ನಗರದಲ್ಲಿ ಇಂಗ್ಲಂಡ-ಅಮೇರಿಕೆಗಳ ಒಗ್ಗೂಟವನ್ನು ಸ್ಥಾಪಿಸುವ ಯೋಜನೆಯನ್ನು ಹೊರಗೆಡಹಿ ಅವರು ಅಂತರ್‌ರಾಷ್ಟ್ರೀಯ ಸಂಬಂಧದಲ್ಲಿ ಸಾಕಷ್ಟು ಕಿಡಿಗೇಡಿತನವನ್ನು ಮಾಡಿದ್ದರು. ಆ ಭಾಷಣ ಅವರನ್ನು ಎರಡೂ ದೇಶಗಳಲ್ಲಿ ಸಾಕಷ್ಟು ಅಪ್ರಿಯರನ್ನಾಗಿ ಮಾಡಿದ್ದಲ್ಲದೆ ಸೋವಿಯಟ್ ರಾಜ್ಯವನ್ನು ಬ್ರಿಟಿಶರ ಕಡೆಗೆ ಸಂಶಯಚಿತ್ತವನ್ನಾಗಿ ಮಾಡಿತು. ಅಂದಿನಿಂದ ಕೆಲ ದಿನಗಳ ವರೆಗೆ ಅವರು ಸ್ವಲ್ಪ ಮೌನವನ್ನು ಆಚರಿಸುತ್ತ ಬಂದಿದ್ದರು. ಆದರೆ ಕಳೆದ ವಾರ ಸ್ವಿಝರ್ಲಂಡಿನ ಝೂರಿಚ್ ನಗರದಲ್ಲಿಇನ್ನೊಂದು ಅಮೂಲ್ಯ ಯೋಜನೆಯನ್ನು ಜಗತ್ತಿನ ಮುಂದಿಟ್ಟು ಅವರು ಮಾತಾಡುವವರಿಗೊಂದು ವಸ್ತುವನ್ನು ಒದಗಿಸಿ ಕೊಟ್ಟರು. ಅವರ ಉದ್ದೇಶ ಸಾತ್ವಿಕವಾಗಿತ್ತು: ಅವರ ಹೃದಯ "ಯುರೋಪಿನ ದುರಂತ" ದಿಂದ ನೊಂದುಕೊಂಡಿತ್ತು. "ಈ ಭೂಲೋಕದ ಅತಿ ಸುಸಂಸ್ಕೃತ ಮತ್ತು ಸುಂದರ ಪ್ರದೇಶಗಳನ್ನೊಳಗೊಂಡ, ಕ್ರಿಸ್ತ ಧರ್ಮ, ಕ್ರೈಸ್ತ ಧ್ಯೇಯಗಳ ಬುಗ್ಗೆಯಾದ ಈ ಉದಾತ್ತ ಭೂಖಂಡ" ದ ಭಗ್ನ ನಗರಗಳನ್ನು, "ಪೀಡಿತ, ಕ್ಷುಧಿತ, ಚಿಂತಾಕ್ರಾಂತ, ಕಿಂಕರ್ತವ್ಯವಿಮೂಢ ಜನರಾಶಿ"ಯನ್ನು ನೋಡಿ ಅವರು ಮರುಕಗೊಂಡಿದ್ದರು. ಅಲ್ಲದೆ, ಮುಂಬರುವ ಕರಾಳ ದಿನಗಳಿಗಾಗಿ ಅವರು ಭೀತರಾಗಿದ್ದರು. ಹಳೆಯ ದಬ್ಬಾಳಿಕೆ ಹೋಗಿದ್ದರೂ "ಹೊಸ ದಬ್ಬಾಳಿಕೆಯ ಕರಾಳ ಮೇಘಗಳು" ಅವರಿಗೆ ದಿಗಂತದಲ್ಲಿ ಕಾಣಿಸತೊಡಗಿದ್ದವು. ಸಾಲದ್ದಕ್ಕೆ ಪರಮಾಣು ಬಾಂಬಿನ ಘನಘೋರ ಸ್ವರೂಪಕ್ಕೆ ನಡುಗಿ ಅವರು "ಸದ್ಯಕ್ಕಂತೂ ಈ ಅಸ್ತ್ರ ಶಾಂತಿಯ ಹಿತಕ್ಕಾಗಿ ಹೊರತು ಅದನ್ನು ಬೇರಾವುದಕ್ಕೂ ಉಪಯೋಗಿಸಲಾರದ ಸಭ್ಯ ಜನಾಂಗದ ಕೈಲಿದೆ. ಆದರೆ ಕೆಲವೇ ವರ್ಷಗಳಲ್ಲಿ ಅದರ ರಹಸ್ಯ ಎಲ್ಲ ಕಡೆಗೆ ತಿಳಿದುಹೋದರೆ, ಅದನ್ನು ಅನೇಕ ಯುದ್ಧಾಸಕ್ತ ರಾಷ್ಟ್ರಗಳು ಪ್ರಯೋಗಿಸ ತೊಡಗಿದಾಗ ನಾವು ಯಾವುದನ್ನು ನಾಗರಿಕತೆಯೆಂದು ಕರೆಯುತ್ತಿರುವೆವೋ ಅದೆಲ್ಲ ನಷ್ಟವಾಗುವದು ಅಷ್ಟೇ ಅಲ್ಲ ಈ ಭೂಗೋಲವೇ ನಿರ್ನಾಮವಾಗುವ ಅವಸ್ಥೆಯುಂಟಾದರೂ ಆಗಬಹುದು" ಎಂದು ಎಚ್ಚರಿಸಿದರು. ವೈದ್ಯ ಚರ್ಚಿಲ್ಲರ ಹತ್ತಿರ ಈ ಭಯಂಕರ ರೋಗಕ್ಕೆ "ರಾಮಬಾಣ ಔಷಧ" ವಿದ್ದೇ ಇತ್ತು. ಯುರೋಪಿನ ಸಂಯುಕ್ತ ರಾಜ್ಯವನ್ನು ರಚಿಸುವದೇ ಅವರ ರಾಮಬಾಣ ಉಪಾಯವಾಗಿತ್ತು. ಅದರಲ್ಲಿ ಸಣ್ಣ ದೊಡ್ಡ ರಾಷ್ಟ್ರಗಳು ಶಾಂತಿ ಸಮೃದ್ಧಿ ಸಮಾಧಾನಗಳಿಂದ ಬಾಳಬಹುದೆಂದು ಅವರಿಗೆ ಖಂಡಿತ ನಂಬಿಕೆಯಿತ್ತು. ಈ ಸಂಯುಕ್ತ ರಾಜ್ಯದ ಮುಂದಾಳ್ತನವನ್ನು ಫ್ರೆಂಚರು,-ಮತ್ತು ಮೂಗಿಗೆ ಬೆರಳು ಹಚ್ಚಬೇಡಿರಿ— ಜರ್ಮನರು ವಹಿಸಬೇಕೆಂಬುದು ಅವರ ಅಮೂಲ್ಯ ಸಲಹೆಯಾಗಿತ್ತು. ಇಂಥ ಪ್ರಾದೇಶಿಕ ಸಂಯುಕ್ತ ರಾಜ್ಯದಿಂದ ಯುಕ್ತರಾಷ್ಟ್ರ ಸಂಸ್ಥೆಗೆ ಯಾವ ಕೆಡಕೂ ಇಲ್ಲವಂತೆ. ಈ ಯುರೋಪಿಯನ್ ಸಂಯುಕ್ತ ರಾಜ್ಯಕ್ಕೆ ಬ್ರಿಟನ್, ಅಮೇರಿಕೆ ಮತ್ತು ಸೋವಿಯೆಟ್ ಯೂನಿಯನ್ ಬೆಂಬಲ ಕೊಡಬೇಕೆಂದು ಅವರು ಆಶಿಸಿದರು. ಇಂಥ ಯುರೋಪಿಗೆ ಬ್ರಿಟಿಶ ಸಾಮ್ರಾಜ್ಯದ ಮೇಲ್ಪಂಕ್ತಿಯನ್ನು ಬೊಟ್ಟುಮಾಡಿ ತೋರಲು ಚರ್ಚಿಲ್ಲರು ಮರೆಯಲಿಲ್ಲ.

ಚರ್ಚಿಲ್ಲರ ಈ ಯೋಜನೆ ಬಹಳ ಸಾತ್ವಿಕವಾಗಿ ಕಾಣುತ್ತದೆ. ಆದರೆ ಅದರ ಕೆಳಗೆ ಎಂಥ ಘೋರ ಯುದ್ಧೋತ್ಪಾದಕ ಧ್ಯೇಯ ಅಡಗಿದೆಯೆಂದು ಕಣ್ಣಿಯಿಂದ ಕೆದರಿದರೂ ತೋರಬಹುದು. ಯೋಜನೆಗೆ ಇತರರ ಸಂಗಡ ಸೋವಿಯಟ್ ಯೂನಿಯನ್ನಿನ ಬೆಂಬಲವೂ ಬೇಕೆಂದು ಚರ್ಚಿಲ್ಲರು ಹೇಳಿದ್ದು ಬರಿ ಉಪಚಾರಮಾತ್ರ. ಏಕೆಂದರೆ ಯುರೋಪಿನ ದಿಗಂತದಲ್ಲಿ ಅವರು ಕಾಣುತಿರುವ ಆ ಹೊಸ ದಬ್ಬಾಳಿಕೆ ಯಾವುದು? ಬ್ರಿಟನ್ ಅಂತೂ ಆದರ್ಶ ರಾಜ್ಯವಾಯಿತು. ಅಮೇರಿಕೆಯೋ ಪರಮಾಣು ಬಾಂಬನ್ನು ಶಾಂತಿಗಾಗಿ ಹೊರತು ಅನ್ಯಥಾ ಉಪಯೋಗಿಸಲಾರದ ಸಾತ್ವಿಕರಾಷ್ಟ್ರವಾಯಿತು. ಅಲ್ಲದೆ ಅವೆರಡರಲ್ಲಿ ಚರ್ಚಿಲ್ಲರಿಗೆ "ದಬ್ಬಾಳಿಕೆ" ಯಂತೆ ತೋರುವ ಗುಣವಿಲ್ಲ. ಫ್ರಾನ್ಸ್ ಜರ್ಮನಿಗಳು ಮುಂದಾಳ್ತನ ವಹಿಸುವ ಸಂಭಾವಿತರಾದರು. ಇನ್ನುಳಿದ 'ದಬ್ಬಾಳಿಕೆ' ಯೆಂದರೆ ಸೋವಿಯಟ್‌ಸಾಮ್ರಾಜ್ಯವಾದದ್ದು. ಚರ್ಚಿಲ್ಲರನ್ನೂ ಅವರ ಶಿಷ್ಯರನ್ನೂ ಹಗಲಿರುಳು ಕಾಡುತಿರುವ ದುಸ್ವಪ್ನವದು. ಚರ್ಚಿಲ್ಲರ ಯುರೋಪಿನ ಸಂಯುಕ್ತರಾಜ್ಯ ಸೋವಿಯಟ್ ರಶಿಯಾದ ವಿರುದ್ಧ ಗುರಿಹಿಡಿದುದೆಂದು ದಡ್ಡನಿಗೂ ತೋಚಬಹುದು. ಆದರೆ ಈ ಯೋಜನೆಗೆ ಸೋವಿಯಟ್ ರಶಿಯಾ ಒತ್ತಟ್ಟಿಗಿರಲಿ – ಜರ್ಮನಿಯಿಂದ ಸಾಕಷ್ಟು ಪಾಠ ಕಲಿತಿರುವ ಫ್ರಾನ್ಸ್ ಕೂಡ ಹೂಂಗುಟ್ಟುವ ಸಂಭವವಿಲ್ಲ. ಅದು ಕಾರಣ ಸೋವಿಯಟ್ ರಶಿಯಾಕ್ಕೂ ಇತರ ಯುರೋಪಿಯನ್ ರಾಷ್ಟ್ರಗಳಿಗೂ ಇರುವ ಈಗಾಗಲೆ ಹುಳಿಸತೊಡಗಿರುವ ಹಾಲಿನಂಥ ಸಂಬಂಧದಲ್ಲಿ ಇನ್ನಷ್ಟು ಮಜ್ಜಿಗೆ ಬೆರಸಿ ಯುದ್ಧವನ್ನು ಹತ್ತಿರ ತರುವ ಪ್ರಯತ್ನದಲ್ಲಿ ಚರ್ಚಿಲ್ಲರು ಅವ್ಯಕ್ತವಾಗಿ ತೊಡಗಿದ್ದಾರೆಂದರೆ ಬಹಳ ತಪ್ಪಾಗದು.

# ಅಂತರ್‌ರಾಷ್ಟ್ರೀಯ

### ಸ್ಟಾಲಿನ್ನರಿಗೆ ಕಾರ್ಮೋಡ ಕಾಣಿಸುವದಿಲ್ಲ

ಇತ್ತ ವಿನ್‌ಸ್ಟನ್ ಚರ್ಚಿಲ್ಲರು ಹೊಸ ಪರಮಾಣು ಯುದ್ಧದ ಬೆದರಿಕೆಯಿಂದ ಸ್ವಿಸ್ ಜನರ ಕೈಕಾಲು ತಪ್ಪಿಸಲು ಪ್ರಯತ್ನಿಸಿದ ಕೆಲವೇ ದಿನಗಳಲ್ಲಿ ಮಾಸ್ಕೋದಲ್ಲಿ ದಂಡನಾಯಕ ಸ್ಟಾಲಿನ್ನರು ಬ್ರಿಟಿಶ ಸುದ್ದಿಗಾರನೊಬ್ಬನಿಗೆ ಕೊಟ್ಟ ಸಂದರ್ಶನದ ಕಾಲದಲ್ಲಿ ಬರಲಿರುವ ಯುದ್ಧದ ಮಾತುಗಳನ್ನು ಉಸ್ಸೆಂದು ಊದಿ ಹಾರಿಸಿಬಿಟ್ಟರು. ಸುದ್ದಿಗಾರನ ಪ್ರಶ್ನೆಗಳಿಗೆ ಅವರಿತ್ತ ಉತ್ತರಗಳು ಕುತೂಹಲಪ್ರದವಾಗಿಯೆ ಇವೆ. ಯುದ್ಧ ಬಂತೋ ಎಂಬ ಕೂಗೆಬ್ಬಿಸುತಿರುವವರು ಸ್ವಾರ್ಥಿಗಳು. ತಮ್ಮ ದೇಶದಲ್ಲಿ ಯುದ್ಧ ಮುಂಗಡ ಪತ್ರಿಕೆಯ ಅಂಕಿಗಳನ್ನು ಕಡಿಮೆ ಮಾಡದಂತೆ ಹಾಗು ಸೈನ್ಯ ವಿಸರ್ಜನೆ ಬೇಗನೇ ಆಗದಂತೆ ತಡೆದು ದೊಡ್ಡ ಪ್ರಮಾಣದ ನಿರುದ್ಯೋಗವನ್ನು ತಾತ್ಕಾಲಿಕವಾಗಿಯಾದರೂ ಮುಂದೆ ಹಾಕುವದು ಅವರ ಉದ್ದೇಶ. ಸ್ವದೇಶದಲ್ಲಿಯ ರಾಜಕೀಯ ವಿರೋಧಿಗಳನ್ನು ಯುದ್ಧದ ಹೆಸರು ಹೇಳಿ ಹೆದರಿಸಿ ವಿರೋಧವನ್ನು ಕುಗ್ಗಿಸುವ ಆಟವಿದು. ಎಂಬದಾಗಿ ಸ್ಟಾಲಿನ್ನರು ಅಭಿಪ್ರಾಯಪಟ್ಟರು. ಇಂಗ್ಲಂಡ ಅಮೇರಿಕೆಗಳು ಸೇರಿ ಸೋವಿಯಟ್ ಯೂನಿಯನ್ನಿನ ಸುತ್ತ ಬಂಡವಳಗಾರ ಬೇಲಿಯನ್ನು ಕಟ್ಟುವವೆಂದೂ ಅವರು ಭಯಪಡಲಿಲ್ಲ. ಆ ರಾಜ್ಯಗಳು ಹಾಗೆ ಆಶಿಸಿದರೂ ಅದು ಅವುಗಳ ಸಾಮರ್ಥ್ಯಕ್ಕೆ ಹೊರಗಿನದೆಂದು ಅವರೆಣಿಸಿದ್ದಾರೆ. ಅಮೇರಿಕೆಯ ವಾಣಿಜ್ಯ ಮಂತ್ರಿ ಹೆನ್ರಿ ವಾಲೇಸರು ಹೇಳಿದಂತೆ ಬಂಡವಳಗಾರ ಹಾಗು ಕಮ್ಯುನಿಸ್ಟ ರಾಜ್ಯಗಳಲ್ಲಿ ಸಹಕಾರ ಹಾಗು "ಸ್ನೇಹಮಯ ಮೇಲಾಟ" ಸಾಧ್ಯವಿದೆಯೆಂದು ಅವರು ಹೇಳಿದರು. ಪರಮಾಣು ರಹಸ್ಯವನ್ನು ಅಮೇರಿಕೆಯೇ ಇಟ್ಟುಕೊಂಡದ್ದರಿಂದ ಶಾಂತಿಗೆ ದೊಡ್ಡ ಗಂಡಾಂತರವುಂಟಾಗಿದೆಂದು ಕೂಡ ಸ್ಟಾಲಿನ್ನರು ನಂಬುವದಿಲ್ಲ. ಗಂಡಾಂತರವುಂಟಾಗಿರುವದು ನಿಜವಾದರೂ ಅದು ಅಷ್ಟು ಮಹತ್ವದ್ದಲ್ಲವೆಂದು ಅವರ ಹೇಳಿಕೆ. ಪರಮಾಣು ಬಾಂಬು ಅಳ್ಳೆದೆಯವರನ್ನು ಬೆದರಿಸಬಲ್ಲದು ಹೊರತು ಯುದ್ಧದ ಫಲನಿರ್ಣಯವನ್ನು ಮಾಡುವ ಸಾಮರ್ಥ್ಯ ಅದರಲ್ಲಿಲ್ಲವೆಂದು ಅವರು ಹೇಳಿದ್ದಾರೆ.

### ವಾಲೇಸರ ರಾಜೀನಾಮೆ

ಅಮೇರಿಕೆಯ ವಿದೇಶ ಧೋರಣೆ ಹೆಚ್ಚು ರಶಿಯಾದ ಪಕ್ಷಪಾತಿಯಾಗಬೇಕೆಂದು ಬಹಿರಂಗವಾಗಿ ಸಾರಿದ ತಪ್ಪಿಗಾಗಿ ವಾಣಿಜ್ಯ ಮಂತ್ರಿ ವಾಲೇಸರು ತಮ್ಮ ಸ್ಥಾನಕ್ಕೆ ರಾಜೀನಾಮೆ ಕೊಡಬೇಕಾಗಿ ಬಂತು. ಅವರ ಭಾಷಣದ ನಂತರ ಅವರು ಕೆಲವಾರಗಳ ಹಿಂದೆ ಇದೇ ವಿಷಯದ ಬಗ್ಗೆ ಅಧ್ಯಕ್ಷ ಟ್ರೂಮನ್ನರಿಗೆ ಬರೆದಿದ್ದ ಪತ್ರ ಅಮೇರಿಕನ್ ಪತ್ರಿಕೆಗಳಲ್ಲಿ ಪ್ರಸಿದ್ಧವಾಗಿದೆ. ಆ ಪತ್ರದಲ್ಲಿ ಅವರು ತಮ್ಮ ಭಾಷಣದಲ್ಲಿ ಹೇಳಿದುದಕ್ಕಿಂತಲೂ ಹೆಚ್ಚಾದ ಕೆಲ ಮಹತ್ವದ ಸಂಗತಿಗಳನ್ನು ಅಧ್ಯಕ್ಷರ ಲಕ್ಷಕ್ಕೆ ತಂದಿದ್ದರು. ಸೈನ್ಯ ಮತ್ತು ನೌಕಾಖಾತೆಗಳ ಮುಂದಾಳುಗಳು ರಶಿಯಾದ ವಿರುದ್ಧ "ನಿರೋಧಕ ಯುದ್ಧ" ಅಂದರೆ ರಶಿಯಾದ ಶಕ್ತಿ ಹೆಚ್ಚಾಗುವದನ್ನು ಮೊದಲೇ ತಡೆಯುವಂತೆ ಬೇಗನೆ ಯುದ್ಧ ಹೂಡಬೇಕೆಂದು ಸಂಚು ನಡೆಸಿರುವರೆಂದು ಅವರು ಆಪಾದಿಸಿದ್ದಾರೆ. ವಾಲೇಸರ ಹೇಳಿಕೆಗೂ ವಿದೇಶ ಮಂತ್ರಿ ಬರ್ನ್ಸರು ಪ್ಯಾರಿಸ ಶಾಂತಿಪರಿಷತ್ತಿನಲ್ಲಿ ಅನುಸರಿಸುತಿರುವ ಧೋರಣೆಗೂ ಬಹಳ ಅಂತರವಿರುವದರಿಂದ ಬರ್ನ್ಸರು ಟ್ರೂಮನ್ನರಿಂದ ಅವರ ಧೋರಣೆಯ ಸ್ಪಷ್ಟೀಕರಣವನ್ನು ಕೇಳಿದರು. ವಾಲೇಸರ ಅಭಿಪ್ರಾಯ ಸರಕಾರದ್ದಲ್ಲವೆಂದು ಅವರು ಹೇಳಿದ್ದು ಸಾಲದೆಂದು ಬರ್ನ್ಸರು ಹಟತೊಟ್ಟರು. ಪರಿಣಾಮವಾಗಿ ಟ್ರೂಮನ್ನರು ಅಮೇರಿಕೆಯ ವಿದೇಶ ಧೋರಣೆಯಲ್ಲಿ ಏನೂ ವ್ಯತ್ಯಾಸವಾಗಿಲ್ಲವೆಂದು ಬಾಯಿಬಿಟ್ಟು ಆಶ್ವಾಸನ ಕೊಡಬೇಕಾಯಿತು ಮತ್ತು ಹೆನ್ರಿ ವಾಲೇಸರಿಂದ ರಾಜೀನಾಮೆ ಕೊಡಿಸಿ ಮಂತ್ರಿಮಂಡಳದವರಾರೂ ಇನ್ನು ಮುಂದೆ ವಿದೇಶ ಖಾತೆಯ ಅನುಮತಿಯಿಲ್ಲದೆ ವಿದೇಶ ಧೋರಣೆಯ ಬಗ್ಗೆ ಹೇಳಿಕೆ ಹೊರಡಿಸತಕ್ಕದ್ದಲ್ಲವೆಂದೂ ಆಜ್ಞಾಪಿಸಿದ್ದಾರೆ. ವಾಲೇಸರ ಸ್ಥಾನದಲ್ಲಿ ಸದ್ಯಕ್ಕೆ ಬ್ರಿಟನದಲ್ಲಿ ಅಮೇರಿಕನ್ ರಾಯಭಾರಿಯಾಗಿರುವ ಆ್ಯವರಿಲ್ ಹ್ಯಾರಿಮನ್ನರು ನೇಮಿಸಲ್ಪಟ್ಟಿದ್ದಾರೆ.

ಅಧ್ಯಕ್ಷ ಟ್ರೂಮನ್ನರ ಈ ಕೃತಿಯನ್ನು ಕೆಲ ಅಮೇರಿಕನ್ ಪತ್ರಿಕೆಗಳೂ ಬ್ರಿಟಿಶರೂ ಸ್ವಾಗತಿಸಿದ್ದಾರೆ. ಇದು ಸಹಜವೇ. ಆದರೆ ಈ ಸ್ಥಿತ್ಯಂತರದ ಸಂಕೇತ ಮಹತ್ವದ್ದಾಗಿದೆ. ಟ್ರೂಮನ್ನರ ಕಾಲದಲ್ಲಿ ಮಂತ್ರಿಮಂಡಲದಿಂದ ಹೊರಬಿದ್ದ ರೂಜವೆಲ್ಟರ 'ನ್ಯೂಡೀಲ' (ಹೊಸ ವ್ಯವಸ್ಥೆ) ವಾದಿಗಳಲ್ಲಿ ವಾಲೇಸರೇ ಕೊನೆಯವರು. ಈ ಮೊದಲು ರೂಜವೆಲ್ಟ ಪಕ್ಷಪಾತಿಗಳೆಲ್ಲ ಒಬ್ಬೊಬ್ಬರಾಗಿ ಹೊರಬಿದ್ದು ಹೋದರು. ಟ್ರೂಮನ್ನರು ಪ್ರತಿಗಾಮಿಗಳ ಕೈಯಲ್ಲಿ ತಮ್ಮ ಬುದ್ಧಿಯನ್ನು ಕೊಟ್ಟಿದ್ದಾರೆಂದು ಇದಕ್ಕಾಗಿಯೆ ಪ್ರಾಗತಿಕರು ದೂರುತಿದ್ದಾರೆ. ಹೊರಬಿದ್ದ ವಾಲೇಸರು ಇತರ ಪ್ರಾಗತಿಕರೊಡನೆ ಸೇರಿ ಜಾಗತಿಕ ಶಾಂತಿಗಾಗಿ ದುಡಿಯುವ ಭರವಸೆ ಕೊಟ್ಟಿದ್ದಾರೆ. ಪ್ರಾಗತಿಕ ಪಕ್ಷವನ್ನು ಕಟ್ಟಿ ಮುಂದಿನ (೧೯೪೮) ಚುನಾವಣೆಗಳಲ್ಲಿ ಅವರು ಹೋರಾಡುವರು.

### ಇರಾಣದಲ್ಲಿ ಹೊಸ ಬಂಡಾಯ

ಇರಾಣಕ್ಕೆ ಹೊಸತೊಂದು ತೊಂದರೆ ಗಂಟುಬಿದ್ದಿದೆ. ಅಝುರಬೈಜಾನದ "ಪ್ರಜಾತಂತ್ರ" ಪಕ್ಷದವರು ರಶಿಯನ್ ಬೆಂಬಲದಿಂದ ಅಲ್ಲಿ ಎಬ್ಬಿಸಿದ ಗಲಿಬಿಲಿಯೇ ಇನ್ನೂ ಪೂರ್ತಿಯಾಗಿ ನಿರ್ಣಯಗೊಂಡಿಲ್ಲ. ಅಝುರಬೈಜಾನ ಮುಂದಾಳುಗಳಿಗೂ ಕೇಂದ್ರ ಸರಕಾರಕ್ಕೂ ನಡುವೆ

—೩ನೇ ಪುಟಕ್ಕೆ



ಪ್ಯಾರಿಸನಲ್ಲಿ ಸೇರಿರುವ ಶಾಂತಿ ಪರಿಷತ್ತಿನ ಒಂದು ನೋಟ:— ಕಾರ್ಯಪದ್ಧತಿ ನಿಯಮಾವಲಿ ಸಭೆಯ ಬೆಲ್ಜಿಯಮದ ಮಿ. ಸ್ಪಾಕರ ಅಧ್ಯಕ್ಷತೆಯಲ್ಲಿ ಕಾರ್ಯಕಲಾಪ ನಡೆಸುತ್ತಿದೆ.

# ಸೋವ್ಹಿಯೆಟ್ ರಾಜ್ಯದ ಮೃತ್ಯುಂಜಯ

## ಡಾ. ನೆಗವ್ಸ್ಕಿಯ ಯಶಸ್ವಿ ಪ್ರಯೋಗಗಳು

"ಸಾಧಾರಣ ಕೆಲಸಗಳನ್ನು ಅಸಾಧಾರಣ ರೀತಿಯಿಂದ ಮಾಡುವ ಹುಚ್ಚರು" ಎಂದು ಸೋವಿಯಟ್ ವಿಜ್ಞಾನಿಗಳನ್ನು ತೆಗಳುವದುಂಟು. ಆದರೆ ಅಸಾಧಾರಣ ಕೆಲಸಗಳನ್ನು ಸಾಧಾರಣ ರೀತಿಯಿಂದ ಮಾಡಿತೋರಿಸುವದರಲ್ಲೂ ಅವರು ಯಶಸ್ವಿಗಳಾಗಿದ್ದಾರೆ. ಸಾವಿನ ವಿರುದ್ಧ ಅವರು ಯುದ್ಧ ಹೂಡಿ ಗೆದ್ದು ಜಗತ್ತಿನ ವಿಜ್ಞಾನಿಗಳಿಂದ ಕೀರ್ತಿ ಸಂಪಾದಿಸಿದ್ದಾರೆ.

ಮನುಷ್ಯರನ್ನು ಸಚೇತನರು ಮತ್ತು ಸತ್ತವರು ಎಂದು ಎರಡು ಭಾಗ ಮಾಡುವ ಪರಿಪಾಠ ಒಂದು ಕಾಲದಲ್ಲಿತ್ತು. ಬದುಕಿಗೂ ಸಾವಿಗೂ ನಡುವೆ ನಿರ್ದಿಷ್ಟವಾದ ಗಡಿಯಿದೆಯೆಂದೂ ಬದುಕಿನ ರಾಜ್ಯದ ಗಡಿಯನ್ನು ದಾಟಿ ಆ ಬದಿಗೆ ಕಾಲಿಟ್ಟವನನ್ನು ಹಿಂದಕ್ಕೆ ತರುವದು ಅಸಾಧ್ಯವೆಂದೂ ನಂಬಿಕೆ ಹಬ್ಬಿತ್ತು.

ಆದರೆ, ಈಗ, ಜೀವನ ಮರಣಗಳ ನಡುವೆ ಅಂಥ ಸ್ಫುಟವಾದ ಗೆರೆಯಿಲ್ಲವೆಂದೂ ಅತ್ತ ಜಾರಿ ಹೋದ ಮನುಷ್ಯನನ್ನು ಹಿಂದೆ ತರುವದು ಸಾಧ್ಯವಿದೆಯೆಂದೂ ವಿಜ್ಞಾನ ಕಂಡುಹಿಡಿದಿದೆ. ರಶಿಯಾದ ಡಾ. ನೆಗವ್ಸ್ಕಿ ಈಪ್ರಕಾರ ೫೧ಜನರನ್ನು ಯಮಲೋಕದಿಂದ ಹಿಂದೆ ಕರೆತಂದಿದ್ದಾನೆ.

ಸತ್ತವನನ್ನು ಸತ್ತು ೫ ನಿಮಿಷಗಳಲ್ಲಿಯೇ ಬದುಕಿಸಬೇಕು. ಅನಂತರ ಸಾಧ್ಯವಿಲ್ಲ. ಇದೀಗ ಸದ್ಯದ ಅವಧಿ. ಆದರೆ ಸತ್ತವನು ಬದುಕಬಲ್ಲನೆಂಬ ಮಾತೇ ಎಲ್ಲಕ್ಕಿಂತ ಮಹತ್ವದ್ದು. ಉದ್ವೇಗ, ರಕ್ತಸ್ರಾವ, ಅಥವಾ ಇತರ ಗುಣಪಡಿಸಬಹುದಾದ ರೋಗಗಳಿಂದ ಸತ್ತವರು ಶಾಶ್ವತವಾಗಿ ಯಮಲೋಕದಲ್ಲಿ ಉಳಿದುಕೊಳ್ಳುವದು ಇನ್ನು ಅವಶ್ಯವಿಲ್ಲ.

### ಸಾವು ಒಮ್ಮೆಲೆ ಬರುವದಿಲ್ಲ

ಯುದ್ಧದಲ್ಲಿ ಸತ್ತ ಸೈನಿಕರನ್ನು ಪುನರುಜ್ಜೀವಿಸುವದರಿಂದ ಡಾ. ನೆಗವ್ಸ್ಕಿಯ ಪ್ರಯೋಗ ಪ್ರಾರಂಭವಾಯಿತು. ದೇಹ ಒಮ್ಮೆಲೇ ಸಾಯುವದಿಲ್ಲವೆಂಬ ಸಿದ್ಧಾಂತವೇ ಅವನ ಪ್ರಯತ್ನಕ್ಕೆ ಆಧಾರವಾಗಿತ್ತು. "ಸಾವು ಜೀವನದ ಹಠಾತ್ ಅವಸಾನವಲ್ಲ" ಎಂದು ಅವನ ಹೇಳಿಕೆ. "ಬದುಕಿಗೂ ಸಾವಿಗೂ ನಡುವೆ ಹಲವು ಅಂತರಾವಸ್ಥೆಗಳಿವೆ."

ಹೀಗೆ ಹೃದಯಕ್ರಿಯೆ ನಿಂತುಹೋದರೂ ದೇಹದ ಬೇರೆ ಹಲವು ಭಾಗಗಳು ಬದುಕಿರಬಹುದು. ವೈದ್ಯರು ಒಬ್ಬನನ್ನು ಸತ್ತವನೆಂದು ನಿರ್ಧರಿಸಿದಾಗ ಅದು ಬರಿ "ವೈದ್ಯಕೀಯ ಮೃತ್ಯು"ವಾಗಿರಬಹುದು. ಈ ಸ್ಥಿತಿಯಲ್ಲಿ ಮುಖ್ಯ ಅಂಗವನ್ನು ಚಲಿಸುವಂತೆ ಮಾಡಿದರೆ ಅವನನ್ನು ಪುನರುಜ್ಜೀವಿಸುವದು ಸಾಧ್ಯವಿದೆ. ಬಹಳ ಹೊತ್ತು ಕಳೆದು ಹೋಗಿ "ದೈಹಿಕ ಮೃತ್ಯು" ಒದಗಿದ ನಂತರವೇ ಅವನ ಆಸೆಯನ್ನು ಪೂರ್ತಿಯಾಗಿ ತೊರೆಯಬೇಕು.

### ಮೊದಲನೆಯ ಸತ್ಯವಾನ

ಡಾ. ನೆಗವ್ಸ್ಕಿ ಮತ್ತು ಸಂಗಡಿಗರು ನಡೆಸಿದ ಮೊದಲನೆ ಪ್ರಯೋಗ ಕೆಂಪು ಸೈನ್ಯದ ಸೈನಿಕನಾದ ವೆಲೆಂಟಿನ್ ಚಿರೆಪನೋವನ ಮೇಲೆ. ಕಾಳಗದಲ್ಲಿ ತೀವ್ರ ಗಾಯಗೊಂಡು ಆಸ್ಪತ್ರೆಗೆ ತರಲ್ಪಟ್ಟ ಅವನು ಶಸ್ತ್ರಕ್ರಿಯೆ ಮಾಡುವ ಮೊದಲೆ ಕೈಮೀರಿ ಹೋದನು. ಉಸಿರು ನಿಂತಿತು, ನರಗಳ ಚಲನೆ ಕೊನೆಗೊಂಡಿತು. ಸರ್ಜನ್ನನು "ಆಘಾತ ಮತ್ತು ರಕ್ತಸ್ರಾವದಿಂದ ಮೃತ್ಯು ಒದಗಿತು" ಎಂದು ಎಂದಿನಂತೆ ಬರೆದ. ಅಷ್ಟರಲ್ಲಿ ಡಾ. ನೆಗವ್ಸ್ಕಿ ಒಳಗೆ ಬಂದ. ಮೂರೇ ನಿಮಿಷಗಳಲ್ಲಿ ಅವನು ಕೆಲಸಕ್ಕೆ ತೊಡಗಿದ. ಮತ್ತೊಂದು ನಿಮಿಷದಲ್ಲಿ ಸತ್ತವನ ಹೃದಯ ಚಲಿಸತೊಡಗಿತು, ಮತ್ತೆ ಮೂರು ನಿಮಿಷಗಳಲ್ಲಿ ಉಸಿರು ಆಡತೊಡಗಿತು, ಒಂದು ತಾಸಿನಲ್ಲಿ ಅವನು ಪ್ರಜ್ಞೆಗೆ ಬಂದನು.

ಅಷ್ಟರಲ್ಲೆ ಅವನಿಗೆ ನಿದ್ರೆ ಬಂತು. ಹೆಸರು ಹಿಡಿದು ಕೂಗಿದಾಗ ಅವನು ಕಣ್ಣು ತೆರೆದ. ಪ್ರಶ್ನೆಗಳಿಗೆ ಉತ್ತರವಿತ್ತ. ನೀರಡಿಕೆಗೆ ಬೇಡಿದ. ಅವನ ನಾಡಿ ಕ್ರಮವಾಗಿತ್ತು, ಉಸಿರು ಯಥಾಪ್ರಕಾರ ಇತ್ತು. ಇಂದು ಅವನು ಎದ್ದು ತಿರುಗಾಡುತ್ತ ಎಂದಿನಂತೆ ಬಾಳುವೆ ಮಾಡುತಿರುವ. ತಾನೊಮ್ಮೆ ಸತ್ತಿದ್ದನೆಂದು ನಂಬುವದೇ ಅವನಿಗೆ ಕಠಿಣವಾಗಿದೆ.

ಸತ್ತ ಅವಧಿಯಲ್ಲಿ ಅವನು ಏನನ್ನೂ ಕಾಣಲಿಲ್ಲವಂತೆ. "ಸತ್ತಾಗ ಪ್ರಜ್ಞೆ ತಪ್ಪಿದವನು ಇಡಿ ಪ್ರಯೋಗ ಮುಗಿದಾಗಲೆ ಎಚ್ಚತ್ತೆ. ನಡುವಿನ ಸಮಯದಲ್ಲೆಲ್ಲ ಕ್ಲೋರೋಫಾರ್ಮಿನಿಂದ ಬೋಧ ತಪ್ಪಿದಂತಿತ್ತು" ಎನ್ನುವನವನು.

ಸಾಯುವ ಮನುಷ್ಯನು ಎಲ್ಲಕ್ಕೂ ಮೊದಲು ಪ್ರಜ್ಞೆಯನ್ನು ಕಳೆದುಕೊಳ್ಳುತ್ತಾನೆ. ತಿರುಗಿ ಬದುಕುವಾಗ ಎಲ್ಲಕ್ಕಿಂತ ಕೊನೆಗೆ ಬರುವ ಅವಸ್ಥೆಯೇ ಪ್ರಜ್ಞಾವಸ್ಥೆ. ಸಾವಿನ ದಾಳಿಯನ್ನು ರೋಗಿ ಅರಿಯುವದಿಲ್ಲ. ಆದರಿಂದಲೇ ಅದನ್ನು ಕುರಿತು ಏನೂ ಹೇಳಲಾರದೆ ಹೋಗುತ್ತಾನೆ. ಎಂದು ನೆಗವ್ಸ್ಕಿ ವಿವರಿಸಿದ್ದಾನೆ.

ನೆಗವ್ಸ್ಕಿಯೂ ಅವನ ಸಂಗಡಿಗರೂ ಚಿರೆಪನೋವನನ್ನಲ್ಲದೆ ಬೇರೆ ೫೦ ಜನರನ್ನು ಬದುಕಿಸಿದ್ದಾರೆ. ಎಲ್ಲ ಸಂದರ್ಭಗಳಲ್ಲಿಯೂ ತೀಕ್ಷ್ಣ ಗಾಯಗಳಿಂದ ರೋಗಿಗಳು ಸತ್ತಿದ್ದರು, ಅವರನ್ನು ಉಳಿಸುವ ಸಾಮಾನ್ಯ ಕ್ರಮಗಳೆಲ್ಲ ಅಯಶಸ್ವಿಯಾಗಿದ್ದವು.

ಆದರೆ ಸಾವಿನ ರಾಜ್ಯದಿಂದ ಮರಳಿದ ಈ ೫೧ ಜನರಲ್ಲಿ ಅಧಿಕಾಂಶ ಜನರು ಕೆಲ ತಾಸುಗಳಲ್ಲಿ ಅಥವಾ ದಿನಗಳಲ್ಲಿ ಪುನಃ ಸತ್ತುಹೋದರು. ಅವರು ಉಂಡರು, ಮಾತಾಡಿದರು, ಕಾಗದ ಬರೆದರು ಕೂಡ. ಆದರೆ ಅವರ ಮುಖ್ಯ ಅಂಗಗಳಿಗೆ ಆದ ಧಕ್ಕೆ ಗುಣವಾಗಲಾರದ್ದಾದುದರಿಂದ ಅವರನ್ನು ಮೃತ್ಯು ಮತ್ತೆ ಸೆಳೆಯಿತು. ಹನ್ನೆರಡು ಜನರು ಮಾತ್ರ ಶಾಶ್ವತವಾಗಿ ಬದುಕಿ ಎಂದಿನಂತೆ ಬಾಳುವೆ ನಡೆಸಿದ್ದಾರೆ.

### ಸರಳ ಚಿಕಿತ್ಸೆ

ಸೋವಿಯಟ್ ವಿಜ್ಞಾನಿಗಳ ಚಿಕಿತ್ಸಾ ಪದ್ಧತಿ ಬಹಳ ಸರಳವಾಗಿದೆ. ಸತ್ತ ನಂತರ ಆದಷ್ಟು ಬೇಗನೆ ಚಿಕಿತ್ಸೆಯನ್ನು ತೊಡಗಬೇಕು. ಬಿಸಿ ರಕ್ತವನ್ನು ಅಡ್ರೆನಾಲಿನ್ ಕಾಂಪೌಂಡ (adrenalin compound) ಮತ್ತು ಗ್ಲುಕೋಸ ಸಹಿತ ತೋಳಿನ ಶುದ್ಧ ರಕ್ತನಾಳದಲ್ಲಿ ಇಂಜೆಕ್ಶನ್ ಮಾಡಬೇಕು. ಇದು ಹೃದಯಕ್ಕೆ ತೀರ ಸಮೀಪ ದಾರಿ. ರಭಸದಿಂದ ಇಂಜೆಕ್ಶನ್ ಮಾಡಿದರೆ ಸಾಮಾನ್ಯವಾಗಿ ಇದರಿಂದ ಹೃದಯ ಬಲವಾಗಿ ಕುಗ್ಗುತ್ತದೆ, ಹೀಗೊಮ್ಮೆ ಕುಗ್ಗಿದರೆ ರಕ್ತದ ಓಟ ಶುದ್ಧ ರಕ್ತನಾಳದಿಂದ ತತ್ಸಂಬಂಧಿ ಅಶುದ್ಧ ರಕ್ತನಾಳಕ್ಕೆ ಹರಿಯುವದು. ಸಂಗಡಲೇ ಡಾಕ್ಟರರು ಉಸಿರಾಟವನ್ನು ತೀವ್ರಗೊಳಿಸುವದಕ್ಕಾಗಿ ತಿದಿಯನ್ನು ಉಪಯೋಗಿಸುತ್ತಾರೆ. ಇದನ್ನು ಸ್ವಲ್ಪ ಸಮಯದ ವರೆಗೆ, ತಾಸೆರಡು ತಾಸು, ಪ್ರಾಣ ತಿರುಗಿ ಬಂದು ಸಹಾಯವಿಲ್ಲದೆ ಬದುಕುವ ಸಾಮರ್ಥ್ಯ ಬರುವವರೆಗೆ ಸಾಗಿಸಬೇಕಾಗುತ್ತದೆ.

ಸತ್ತವನ ದೇಹಕ್ಕಾದ ಧಕ್ಕೆಯನ್ನು ಗುಣಪಡಿಸಲು ಸಾಧ್ಯವಿದ್ದ ಪ್ರಸಂಗಗಳಲ್ಲಿ ಮಾತ್ರ ಅವನನ್ನು ಬದುಕಿಸುವದು ಯೋಗ್ಯ. ಯಾವುದೊಂದು ಅವಶ್ಯಕ ಅಂಗ ಸರಿಯಾಗಲಾರದಂಥ ಹೊಡೆತ ತಿಂದಿದ್ದರೆ ಅವನನ್ನು ಬದುಕಿಸುವದರಲ್ಲಿ ಅಷ್ಟು ಅರ್ಥವಿಲ್ಲ. ಏಕೆಂದರೆ ಅವನ ಜೀವನ ಅಲ್ಪಕಾಲದ್ದಾಗುವದು. ಆದರೆ ಶಸ್ತ್ರಕ್ರಿಯೆಗೆ ಮೊದಲು ಅಥವಾ ಶಸ್ತ್ರಕ್ರಿಯೆಯಾಗುತ್ತಿರುವಾಗಲೆ ಸತ್ತವರಿಗೆ ನಿಜವಾದ ಆಶೆಯುಂಟು. ಅವರ ಪುನರುಜ್ಜೀವನದಿಂದ ಸರ್ಜನ್ನರಿಗೆ ಶಸ್ತ್ರಕ್ರಿಯೆಯನ್ನು ಮುಗಿಸಲು ಅವಕಾಶ ಸಿಕ್ಕಂತಾಗುವದು. ಅಪಘಾತ, ಚಳಿ ಬಿಸಲು, ರಕ್ತಸ್ರಾವ, ಮೊದಲಾದವುಗಳಿಂದಲೂ ಮುಳುಗಿ ಅಥವಾ ಉಸಿರು ಕಟ್ಟಿಯೂ ಸತ್ತವರಿಗೆ ಕೂಡ ಇದು ಉಪಯುಕ್ತವಾಗಬಹುದು.

ಡಾ ನೆಗವ್ಸ್ಕಿ ನಡೆಸಿದ ಪ್ರಯೋಗಗಳು ಎಷ್ಟು ಯಶಸ್ವಿಯಾಗಿವೆಯೆಂದರೆ ಡಾಕ್ಟರ ಜನರು ಜಗತ್ತಿನಲ್ಲೆಲ್ಲ ಸತ್ತವರ ಪುನರುಜ್ಜೀವನಕ್ಕೆ ಪ್ರಯತ್ನ ಕೈಕೊಳ್ಳಬೇಕೆಂದು ಅವರು ಪ್ರಾರ್ಥಿಸಿದ್ದಾರೆ.

## ಅಂತರ್ ರಾಷ್ಟ್ರೀಯ

[ ೫ನೇ ಪುಟದಿಂದ ]

ನಡೆದ ಮಾತುಕತೆಗಳು ನನೆಗುದಿಗೆ ಬಿದ್ದು ಆ ಕಡೆಯ ಭಯ ಇನ್ನೂ ಅಡಗಿಲ್ಲ. ಈಗ ಫಾರಸ ಪ್ರಾಂತದ ಗುಡ್ಡಗಾಡಿನ ಜನರೂ ಅಝುರಬೈಜಾನದಂತೆ ಸ್ವಾಯತ್ತತೆಯನ್ನು ಬೇಡಿ ಕೇಂದ್ರ ಸರಕಾರದ ವಿರುದ್ಧ ಬಂಡು ಹೂಡಿದ್ದಾರೆ. ೧೦೦೦ ದೃಢಕಾಯ ಕುರೇಶಿ ಜನರು ಗುಡ್ಡಗಾಡುಗಳಿಂದ ಇಳಿದು ಬಂದು ಶಿರಾಜ ನಗರವನ್ನೂ ಪರ್ಶಿಯನ್ ಅಖಾತದ ದಂಡೆಗಿರುವ ಬುಶೈರ ಬಂದರವನ್ನೂ ಆಕ್ರಮಿಸಿಕೊಂಡರು. ಆ ಪ್ರಾಂತದ ಗವ್ಹರ್ನರರಾದ ಜನರಲ್ ಫತೇಮಿ ಈ ಬಂಡುಗಾರರ ಏಳು ಮುದ್ದೆಗಳ ಬೇಡಿಕೆಗಳೊಡನೆ ತೆಹರಾನಕ್ಕೆ ಬಂದಿದ್ದಾನೆ. ಮುಖ್ಯ ಮಂತ್ರಿ ಗುವಾಮು ಸುಲ್ತಾನೆ ಹೊರತು ಬೇರೆಲ್ಲ ಮಂತ್ರಿಗಳು ರಾಜೀನಾಮೆ ಕೊಡಬೇಕು, ಸೈನ್ಯದಿಂದ ಲಂಚಗುಳಿ ಉಚ್ಚಾಧಿಕಾರಿಗಳನ್ನು ಹೊರಗಟ್ಟಬೇಕು ಅಝುರಬೈಜಾನದಂತೆ ಫಾರಸಪ್ರಾಂತಕ್ಕೂ ಸ್ವಾಯತ್ತತೆ ಬೇಕು, ಪ್ರಾಂತದ ಕಂದಾಯ ಉತ್ಪನ್ನದಲ್ಲಿ ಮೂರಕ್ಕೆರಡಂಶ ಪ್ರಾಂತಕ್ಕೇ ಬಿಟ್ಟುಬಿಡಬೇಕು, ತೆಹರಾಣ ಮಜಲಿಸ್ (ಪಾರ್ಲಿಮೆಂಟ)ನಲ್ಲಿ ಫಾರಸಕ್ಕೆ ಹೆಚ್ಚು ಪ್ರಾತಿನಿಧ್ಯ ಬೇಕು, ಇತ್ಯಾದಿ ಬೇಡಿಕೆಗಳನ್ನು ಬಂಡುಗಾರರು ಮುಂದೊಡ್ಡಿದ್ದಾರೆ. ಬಕ್ತಾರಿ ಗುಡ್ಡಗಾಡಿನಲ್ಲಿ ಜನರ ಮುಂದಾಳುಗಳನ್ನು ಬಿಡುಗಡೆ ಮಾಡಬೇಕೆಂದೂ ಅವರ ಬೇಡಿಕೆಯುಂಟು.

* * *

ಇಂಡೊನೇಶಿಯನ್ ಪ್ರಜಾರಾಜ್ಯದ ಪ್ರತಿನಿಧಿಗಳಿಗೂ ಡಚ್ ಪ್ರತಿನಿಧಿಗಳಿಗೂ ನಡುವೆ ನಡೆಯಲಿರುವ ಒಪ್ಪಂದ ಮಾತುಕತೆಗಳಲ್ಲಿ ಮಧ್ಯಸ್ಥಿಕೆ ವಹಿಸಲು ಬ್ರಿಟಿಶ ಪ್ರತಿನಿಧಿಯಾದ ಲಾರ್ಡ ಕಿಲರ್ನರನ್ನು ಉಭಯ ಪಕ್ಷಗಳೂ ಆಮಂತ್ರಿಸಿವೆ.

* * *

ಬ್ರಹ್ಮದೇಶದಲ್ಲಿ ಗವ್ಹರ್ನರರ ಕಾರ್ಯಕಾರಿ ಮಂಡಲ ರಾಜೀನಾಮೆ ಕೊಡಲು ಸರಕಾರದ ಒತ್ತಾಯವೇ ಕಾರಣವೆಂದೂ ದೇಶದಲ್ಲಿ ಅತ್ಯಂತ ಪ್ರಬಲ ಪಕ್ಷವಾದ ಫ್ಯಾಸಿಸ್ಟ ವಿರೋಧಿ ಲೀಗಿನ ಆಂಗ್ ಸಾನ ಮೊದಲಾದ ಧುರೀಣರು ಮತ್ತು ಯುಸಾ ಪಕ್ಷದವರು ಕಾರ್ಯಕಾರಿ ಮಂಡಲದಲ್ಲಿ ಸೇರುವ ಸಂಭವವಿದೆಯೆಂದೂ ಬಲ್ಲವರು ಹೇಳುತ್ತಾರೆ.

ಜಾವಾಕ್ಕೆ ಇನ್ನು ಸೈನ್ಯ ಕಳಿಸಬಾರದೆಂದು ಸರಕಾರಕ್ಕೆ ಒತ್ತಾಯಗೊಳಿಸುವ ಸಲುವಾಗಿ ಹಾಲಂಡಿನಲ್ಲಿ ಅಲ್ಲಲ್ಲಿ ಜನರು ಮೆರವಣಿಗೆ ಹೊರಡಿಸಿ ಮತಪ್ರದರ್ಶನ ಮಾಡಿದರು.





ಕರ್ಮವೀರ
ಹರಿಜನ ಪುರವಣಿ

# ಆಹಾರ ಕೊರತೆ

ವಾತಾವರಣದಲ್ಲಿ ಭೀತಿ ಮುಸುರಿದಾಗ ಉಂಟಾಗುವ ವ್ಯಾಕುಲತೆಗಿಂತ ತೀವ್ರವಾದುದು ಬೇರೊಂದಿಲ್ಲ. ಇಲ್ಲಿ ನನಗೊಂದು ಸನ್ನಿವೇಶ ನೆನಪಿಗೆ ಬರುತ್ತದೆ. ಸಾಬರಮತಿ ನದಿಯಲ್ಲಿ ನೀರು ಸುಮಾರು ಹೆಚ್ಚಾಗಿಯೆ ಏರಿತ್ತು. ಮಧ್ಯರಾತ್ರಿಕಳೆದು ಹೋಗಿತ್ತು. ಇನ್ನೊಂದು ತಾಸಿಗೆ ಆಶ್ರಮದಲ್ಲಿ ನೀರು ನುಗ್ಗುವದು ಮತ್ತು ನಾವು ಅದನ್ನು ತೆರವು ಮಾಡಿ ಹೋಗದಿದ್ದರೆ ನಾವೆಲ್ಲರೂ ಮುಳುಗಿ ಹೋಗುವ ಸಂಭವವುಂಟು ಎಂದು ಸರದಾರ ಪಟೇಲರು ಹೇಳಿಕಳಿಸಿದ್ದರೆಂದು ಸುದ್ದಿ ಬಂತು. ನಮಗೆ ಸ್ತ್ರೀಪುರುಷ ಬಾಲಕರಿಗೆಲ್ಲ ಅದು ಬಹಳ ಕಾತರದ ಗಳಿಗೆಯಾಯಿತು. ಉಗ್ರ ಜಲಪ್ರವಾಹ ಸೊತ್ತುಗಳಿಗಷ್ಟೆ ತುಸು ಹಾನಿಯೊದಗಿಸಿ ಶಾಂತವಾಗಿ ಇಳಿಯತೊಡಗಿದೆಯೆಂದೂ ಪ್ರಾಣಹಾನಿಯ ಭಯವಿಲ್ಲೆಂದೂ ತಿಳಿದುಬಂದ ನಂತರ ಸಮಾಧಾನದ ನಿಟ್ಟುಸಿರೊಂದು ಆಕಾಶದತ್ತ ಹರಿದು ಹೋಯಿತು.

ಇದೇ ರೀತಿಯಲ್ಲಿ ಅಧಿಕಾರಿ ವರ್ಗಗಳ ವರದಿಗಳಿಂದ ತೋರಿ ಬರುವ ಕೊರತೆಯ ಗಂಡಾಂತರವೂ ನಮ್ಮನ್ನು ಗಾಬರಿಗೊಳಿಸುವದರಲ್ಲಿ ಪರಿಣಮಿಸಿದೆ. ಇದು ನಿಜವಾದ ಉಪವಾಸಕ್ಕಿಂತಲೂ ಅಪಾಯಕರ. ತಿರ್ವಾಂಕೂರಿನ ಎದೆಗಾರ ದಿವಾಣರು ತಮ್ಮ ಸಂಸ್ಥಾನದಲ್ಲಿ ಬರಿ ಎರಡು ವಾರಗಳ ಆಹಾರ ಸಂಗ್ರಹವುಂಟೆಂದು ಗಂಭೀರವಾಗಿ ಪ್ರತಿಪಾದಿಸಿದ ಸುದ್ದಿಯನ್ನು ಪತ್ರಿಕೆಯಿಂದ ಓದಿಸಿ ಕೇಳಿದಾಗ ನನ್ನ ಅವಸ್ಥೆಯೂ ಇದೇ ಬಗೆಯಾಯಿತು. ತಿರುವಾಂಕೂರಿನಅಧ್ಯಂತವನ್ನೆಲ್ಲ ಅರಿತ ನಾನು, ತಿರುವಾಂಕೂರಿನಲ್ಲಿ ಮಾತ್ರವಲ್ಲ ಇಡಿ ಹಿಂದುಸ್ತಾನದಲ್ಲಿ ಸಂಭವಿಸಬಹುದಾದ ಅನಾಹುತಗಳನ್ನೆಲ್ಲ ಕಲ್ಪಿಸಿ ಕಲ್ಪಿಸಿ ಚಿಂತೆಗೊಳಗಾದೆನು. ಗಡ್ಡೆ ಗೆಣಸು, ತೆಂಗಿನ ಕಾಯಿ, ಮೀನು ಧಾರಳವಾಗಿ ಬೆಳೆಯುವ ತಿರ್ವಾಂಕೂರು, ಹಿಂದುಸ್ತಾನದ ಬೇರೆ ಭಾಗದಿಂದ ಏನೂ ಬಾರದಿದ್ದರೆ ಸಹ, ಒಂದು ದಿನವೂ ಉಪವಾಸ ಬೀಳಬೇಕಾಗಿದ್ದಿಲ್ಲ. ತಿರ್ವಾಂಕೂರಿನಲ್ಲಿ ನನಗಿದ್ದ ವಿಶ್ವಾಸವೊಂದೇ ನನಗೆ ಧೈರ್ಯಕೊಟ್ಟಿತು. ಕೊರತೆ ಬಿದ್ದಿರುವದು ಆಹಾರದ್ದಲ್ಲ ಆದರೆ ಗೋದಿ ಅಕ್ಕಿಗಳದೆಂದು ಮತ್ತೆ ತಿಳಿದು ಬಂದಾಗ ನನಗಾದ ಆನಂದ ಅಷ್ಟಿಷ್ಟಲ್ಲ. ತಿರ್ವಾಂಕೂರು ಅಕ್ಕಿಯನ್ನು ಬೆಳೆಯಬಲ್ಲದಲ್ಲದೆ ಗೋದಿಯನ್ನಲ್ಲ. ಧಾನ್ಯಗಳ ಮಟ್ಟಿಗೆ ತಿರ್ವಾಂಕೂರಿನ ನಿವಾಸಿಗಳು ಅಕ್ಕಿಯನ್ನು ಅವಲಂಬಿಸುವವರು. ಅವರು ಗೋದಿಯನ್ನು ಉಪಾಯವಿಲ್ಲದಾಗ, ಅದೂ ಬಹಳ ಕಷ್ಟದಿಂದ ಬಳಸುತ್ತಾರೆ. ಇಂದಿನ ಸಂಕಷ್ಟ ಪರಿಸ್ಥಿತಿಯಿಂದಾದರೂ ನಾವು ತಮ್ಮ ಪ್ರಾಂತಿಕತೆಯನ್ನು ತೊರೆದು ಹಿಂದುಸ್ತಾನದಲ್ಲೆಲ್ಲ ಒಂದೇ ಬಗೆಯ ಅಭ್ಯಾಸಗಳನ್ನು ಇಟ್ಟುಕೊಳ್ಳುವಂತಾದರೆ ಎಷ್ಟು ಒಳಿತಾಗುತಿತ್ತು. ಹಾಗಾದರೆ ಈ ದೇಶದ ಯಾವ ಭಾಗದಲ್ಲೆ ಇರುವ ಕಾಲ ಬಂದರೂ ನಾವು ತೊಂದರೆ ಪಟ್ಟುಕೊಳ್ಳದೆ ಬಾಳಬಲ್ಲವು. ಸದ್ಯಕ್ಕಂತೂ ಹಿಂದುಸ್ಥಾನದಲ್ಲಿರುವ ಹೊಣೆಗಾರ ಜನರೆಲ್ಲರೂ ತಮ್ಮ ತಮ್ಮ ಪ್ರಾಂತ, ಜಿಲ್ಹಾ, ಸಂಸ್ಥಾನಗಳ ಜನರಿಗೆ ಹಿಂದುಸ್ತಾನದ ಹೊರಗಿಂದ ಆಹಾರ ಪೂರೈಕೆಯನ್ನು ನಿರೀಕ್ಷಿಸದೆ ತಾವೇ ಸಾಧ್ಯವಿದ್ದಷ್ಟು ಬೆಳೆಸಿಕೊಂಡು ತಮ್ಮ ಹುಟ್ಟುವಳಿಯಿಂದಲೇ ಜೀವನ ಸಾಗಿಸಲು ಕಲಿಯಬೇಕೆಂದು ಉಪದೇಶಿಸಿದರೆ ಸಾಕು.

ನನಗೆ ಬರುತಿರುವ ಅನೇಕ ಪತ್ರಗಳು ನಿಜಸ್ಥಿತಿಯನ್ನು ಇದ್ದಕ್ಕಿದ್ದಂತೆ ಅಥವಾ ಇರಬೇಕಾದಂತೆ ಬಣ್ಣಿಸುತ್ತಿದ್ದರೆ, ಜೀವನದಾಯಿಯಾದ ಕಾಯಿಪಲ್ಲೆಗಳೊಡನೆ ಶಾಕಾಹಾರಿಗಳಿಗೆ ಸ್ವಲ್ಪ ಹಾಲು ಮಾಂಸಹಾರಿಗಳಿಗೆ ಸ್ವಲ್ಪ ಮೀನು, ಮಾಂಸ ಇಲ್ಲವೆ ಕೋಳಿ ಇವುಗಳ ಅಭಾವವುಂಟಾಗುವ ಭಯವಿಲ್ಲದ್ದರಿಂದ ನಾವು ನಿರಾಹಾರದ ಗಂಡಾಂತರಕ್ಕೆ ಬೆದರಬೇಕಾಗಿಲ್ಲ.

ನಮ್ಮ ಸೀಮೆಯ ಹೊರಗಿಂದ ನಮಗೆ ಹೇಳಿಕೊಳ್ಳುವಷ್ಟು ಆಹಾರ ಪೂರೈಕೆ ಸಿಗುವಂತಿಲ್ಲವೆಂದು ಹಿಂದುಸ್ತಾನ ಮನಗಾಣಲಿ. ನೆರವು ನೀಡಲು ಬಯಸುವವರಿಗೇನು ಕೊರತೆಯಿಲ್ಲ. ಆದರೆ ಅವರೂ ಬಹಳ ಮಟ್ಟಿಗೆ ಪೀಡಿತರು. ಇನ್ನು ಕೆಲವರಲ್ಲಿ ಬಂದಿರುವ ಬೇಡಿಕೆಗಳು ಅವರ ಶಕ್ತಿಗೆ ಮೀರಿದಷ್ಟು ಇವೆ. ಅವರೆಲ್ಲರಿಗೂ ಸಾರಿಗೆಯ ತೊಡಕುಗಳು ವಿಶೇಷವಾಗಿವೆ. ಹೊರಗಿನಿಂದ ಆಹಾರ ಬಂದು ನಮ್ಮ ತೀರದಲ್ಲಿ ಬಿದ್ದಾಗ ನಮಗೂ ಆ ತೊಡಕು ತಪ್ಪಿದ್ದಲ್ಲ. ಅಂತರಿಕ ಸಾರಿಗೆ ಹಂಚಿಕೆಗಳು ಚಿಕ್ಕ ಸಮಸ್ಯೆಗಳಲ್ಲ. ಆದುದರಿಂದ, ವಿವೇಕದ ಹಾದಿಯೆಂದರೆ ಹೋರಾಟಕ್ಕೆ ನಾವೇ ಟೊಂಕಕಟ್ಟಿ ನಮ್ಮ ಆಹಾರವನ್ನು ನಾವೇ ಹುಟ್ಟಿಸಿಕೊಳ್ಳುವೆವು ಇಲ್ಲವೆ ಆ ಪ್ರಯತ್ನದಲ್ಲಿ ಅವಶ್ಯವಾದರೆ ಪ್ರಾಣಕೊಡುವೆವು ಎಂಬ ಧೀರ ಪ್ರತಿಜ್ಞೆಯನ್ನು ತೊಡುವದು.

ಇದೊಂದೇ ತರಣೋಪಾಯ—ಎರಡನೆಯದಿಲ್ಲ.

ಹೊಸದಿಲ್ಲಿ,
೨೧—೯—೧೯೪೬. — ಮೋ. ಕ. ಗಾಂಧಿ.

## ಆಹಾರ ಸೀದಾ

ಹಿಂದುಸ್ತಾನದಲ್ಲಿ ಆಹಾರ ಸೀದಾ ಕಾರ್ಯದಲ್ಲಿ ಒಂದು ತಪ್ಪು ಮಾಡುತ್ತಾರೆ. ಸಂಗ್ರಹ, ಸಾರಿಗೆ, ಉಗ್ರಾಣ, ವಿತರಣ ಇವೆಲ್ಲವುಗಳ ವೆಚ್ಚವನ್ನು ಆಹಾರದ ಬೆಲೆಗೆ ಸೇರಿಸಿಬಿಡುವುದೇ ಆ ತಪ್ಪು. ಪರಿಣಾಮವಾಗಿ ಆಹಾರವನ್ನು ಹುಟ್ಟಿಸಿದವನಿಗೆ ಸಿಗುವ ಮೌಲ್ಯಕ್ಕೂ ಬಳಸುವವನು ಕೊಡುವ ಬೆಲೆಗೂ ನೂರಕ್ಕೆ ೩೦ ರಿಂದ ೫೦ ಕ್ಕೆ ಕಡಿಮೆಯಿಲ್ಲದಷ್ಟು (ಒಮ್ಮೊಮ್ಮೆ ಅದಕ್ಕೂ ಹೆಚ್ಚು) ಅಂತರ ಕಾಣುತ್ತದೆ. ಬೆಲೆಗಳ ಈ ಅಂತರದ ಫಲಗಳು ಇಂತಿವೆ:

(೧) ತಾನು ಮಾರಿದರೆ ಮುಂದೆ ಕೊಳ್ಳಬೇಕಾದ ಪ್ರಸಂಗದಲ್ಲಿ ತನಗೆ ದೊರೆತ ಬೆಲೆಗಿಂತ ಹೆಚ್ಚು ತೆರಬೇಕಾಗುವದೆಂಬ ಭಯದಿಂದ ಉತ್ಪಾದಕನು ಆಹಾರವನ್ನು ಮಾರಲು ಹಿಂದೆಮುಂದೆ ನೋಡುತ್ತಾನೆ.

(೨) ಸರಕಾರದ ನಿಯಂತ್ರಣ ಮತ್ತು ಹಸ್ತಕ್ಷೇಪದ ಭಯದಿಂದ ರೈತನು ಹೆಚ್ಚು ಹೆಚ್ಚು ಬಿತ್ತಲು ಮನಸು ಮಾಡುವದಿಲ್ಲ.

(೩) ಲಾಭಾಂಶ ಬಹಳವಾಗಿರುವದರಿಂದ ಕಳ್ಳ ಪೇಟೆಯಲ್ಲಿ ಮಾರಲು ಅವನಿಗೆ ಉತ್ತೇಜನ ಸಿಗುತ್ತದೆ.

ಆದುದರಿಂದ ಆಹಾರ ನಿಯಂತ್ರಣದ ಆನುಷಂಗಿಕ ವೆಚ್ಚಗಳನ್ನೆಲ್ಲ (ಸಂಗ್ರಹ ಇತ್ಯಾದಿ) ಸರಕಾರವೇ ವಹಿಸಿ ಆಹಾರವನ್ನು ಉತ್ಪಾದಕನಿಂದ ಕೊಂಡ ಬೆಲೆಗೇ ಬಳಸುವವನಿಗೆ ಮಾರಬೇಕು.

ಇದಲ್ಲದೆ ಆಹಾರದ ಬೆಲೆಯನ್ನು ಒಂದರಿಂದ ಮೂರು ವರ್ಷ ಮುಂಚಿತವಾಗಿಯೇ ಗೊತ್ತುಪಡಿಸಬೇಕು. ಇದರಿಂದ ಆಹಾರದ ಉತ್ಪಾದಕನಿಗೂ ಬಳಸುವವನಿಗೂ ತನಗೆ ಸಿಗುವ ಇಲ್ಲವೆ ತಾನು ತೆರಬೇಕಾದ ಬೆಲೆಯೆಷ್ಟೆಂಬದು ಮುಂಚಿತವಾಗಿಯೆ ತಿಳಿದು ಅನುಕೂಲವಾಗುತ್ತದೆ.

ಆನುಷಂಗಿಕ ವೆಚ್ಚಗಳನ್ನು ಸರಕಾರವೇ ವಹಿಸುವ ಈ ವ್ಯವಸ್ಥೆ, ನೋಡಲು ಇಷ್ಟು ಸರಳವಾಗಿ ಕಂಡರೂ ಅದರಿಂದ ಈ ಕೆಳಗಿನ ಪರಿಣಾಮಗಳಾಗುವವು.

(೧) ಕಳ್ಳಪೇಟೆ ಹೇಳಹೆಸರಿಲ್ಲದಾಗುವದು.

(೨) "ಆಹಾರ ಹೆಚ್ಚು ಬೆಳೆಯುವ" ಪ್ರವೃತ್ತಿಗೆ ಉತ್ತೇಜನ ದೊರೆಯುವದು.

(೩) ತನ್ನಲ್ಲಿರುವದನ್ನು ಮಾರಲು ಉತ್ಪಾದಕನಿಗೆ ಮನಸಾಗುತ್ತದೆ; ಏಕೆಂದರೆ ಅದೇ ಬೆಲೆಯಲ್ಲಿ ತನಗೆ ಅದು ಬೇಕಾದಾಗ ಸಿಗುವದೆಂಬ ಭರವಸೆಯಿದೆ.

(೪) ತನ್ನ ಮುಂದಿನ ಜೀವನವೆಚ್ಚ ಇಂತಿಷ್ಟೇ ಎಂದು ಬಳಸುವವನಿಗೆ ಧೈರ್ಯವಾಗುತ್ತದೆ.

(೫) ಜೀವನದ ಮೂಲ ಅವಶ್ಯಕತೆಗಳು ಏಕಪ್ರಕಾರವಾದ ಅಗ್ಗ ಬೆಲೆಯಲ್ಲಿ ದೊರಕುವ ಧೋರಣೆಯುಂಟಾಗುತ್ತದೆ.

ಈ ಬಗೆಯಾದ ಆಹಾರ ನಿಯಂತ್ರಣಕ್ಕೆ ಬೀಳುವ ವೆಚ್ಚವನ್ನು ತುಂಬಿಕೊಳ್ಳಲು ಸೀದಾಕ್ಕೆ ಸೇರದ ಮತ್ತು ನಿಯಂತ್ರಣವಿಲ್ಲದ ವಸ್ತುಗಳ ಮೇಲೆ ಹೆಚ್ಚು ಹೆಚ್ಚಾಗುವ ಮತ್ತು ವಿಲಾಸ ಸಾಮಗ್ರಿಗಳಿಗೆ ಅತ್ಯಧಿಕ ಮಾರಾಟಕರವನ್ನು ಹೊರಿಸಬಹುದು. ಹೀಗೆ ಆಹಾರದಂಥ ಪ್ರಾಥಮಿಕ ಅವಶ್ಯಕತೆಯ ಸಾಮಗ್ರಿಗಳ ಬಗ್ಗೆ ಅನಿವಾರ್ಯವಲ್ಲದ ಮತ್ತು ವಿಲಾಸದ ವಸ್ತುಗಳನ್ನು ಕೊಳ್ಳುವವರಿಂದ ಸಹಾಯಧನವನ್ನು ತೆಗೆದುಕೊಂಡಂತಾಗುವದು.

ಈ ಉಪಾಯವನ್ನು ಚುಟುಕಿನಲ್ಲಿ ಹೀಗೆ ಹೇಳಬಹುದು: ಅವಶ್ಯಕವಾದ ವಸ್ತುಗಳು ಸಾಧ್ಯವಿದ್ದಷ್ಟು ಕಡಿಮೆ ಬೆಲೆಗೆ ದೊರಕುವಂತೆ ಅವುಗಳ ಸಂಗ್ರಹ, ಸಾರಿಗೆ, ಉಗ್ರಾಣ, ವಿತರಣಗಳ ವೆಚ್ಚವನ್ನು, ಜೀವನ, ಆರೋಗ್ಯಗಳಿಗೆ ಅವಶ್ಯಕವಲ್ಲದ ವಸ್ತುಗಳನ್ನು ಕೊಳ್ಳುವವನು ತೆರಬೇಕು.

— ಮಾರಿಸ್ ಫ್ರಿಡ್ಮನ್

## ಕಾಂಗ್ರೆಸ ಮಂತ್ರಿಗಳು ಸಾಹೇಬ ಜನರಲ್ಲ

ಒಬ್ಬ ಕಾಂಗ್ರೆಸ ಕಾರ್ಯಕರ್ತನು ಕೇಳುತ್ತಾನೆ.

"ತಮ್ಮ ಹಿಂದಿನ ಆಂಗ್ಲ ಮಂತ್ರಿಗಳಂತೆ ಕಾಂಗ್ರೆಸ ಮಂತ್ರಿಗಳು ವೈಭವದಲ್ಲಿ ಇರಬಹುದೊ? ತಮ್ಮ ಸ್ವಂತದ ಸಲುವಾಗಿ ಸರಕಾರದ ಮೋಟಾರಗಳನ್ನು ಉಪಯೋಗಿಸುವದು ಉಚಿತವಾಗಬಹುದೊ?

ನನ್ನ ದೃಷ್ಟಿಯಿಂದ ಇವೆರಡೂ ಪ್ರಶ್ನೆಗಳಿಗೆ ಒಂದೇ ಉತ್ತರವಿದೆ. ಕಾಂಗ್ರೆಸು ಜನ ಸಾಮಾನ್ಯರ ಸಂಸ್ಥೆಯೇ ಇರಬೇಕಾಗಿದ್ದರೆ, ಮಂತ್ರಿಗಳು ಆಂಗ್ಲ ಸಾಹೇಬರಂತೆ ತಮ್ಮ ಜೀವನವನ್ನು ಸಾಗಿಸಲಾರರು. ಅಥವಾ ಸರಕಾರವು ಒದಗಿಸಿ ಕೊಟ್ಟ ಸೌಕರ್ಯಗಳ ಉಪಯೋಗವನ್ನು ಸ್ವಂತದ ಸಲುವಾಗಿ ಮಾಡಿಕೊಳ್ಳಲಾರರು.

ಹೊಸದಿಲ್ಲಿ — ಮೋ. ಕ. ಗಾಂಧಿ
೨೦—೯—೪೬

( ಹಿಂದುಸ್ತಾನಿಯಿಂದ )

## ಪ್ರಶ್ನ—ಪೆಟ್ಟಿಗೆ

ಪ್ರ— ಜಗತ್ತಿನಲ್ಲಿ ಎತ್ತ ದೃಷ್ಟಿಯನ್ನು ತಿರುಗಿಸಿದರೂ ಹಿಂಸೆ ಮತ್ತು ಪ್ರಭುತ್ವಸ್ಪರ್ಧೆಯ ರಾಜಕಾರಣವೇ ಕಂಡು ಬರುವವು. ಇಂಗ್ಲಂಡ ಮತ್ತು ಅಮೇರಿಕಾಗಳಂಥ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿಯೂ ಇದೇ ಪರಿಸ್ಥಿತಿ. ಇಂಥ ಪ್ರಸಂಗದಲ್ಲಿ ನೀವು ಅಹಿಂಸೆಯಿಂದ ಯಾವ ಕಾರ್ಯ ಸಾಧಿಸಬಹುದೆಂಬುದನ್ನು ವಿವರಿಸುವಿರೊ?

ಉ— ಪ್ರಭುತ್ವ ಸ್ಪರ್ಧೆಯ ರಾಜಕಾರಣವೇ ಎಲ್ಲೆಡೆಗೆ ಇರುವದು ನಿಜ. ಆದರೆ ಇಂಗ್ಲಂಡ ಮತ್ತು ಅಮೇರಿಕಾದಲ್ಲಿ ಪ್ರಜಾಪ್ರಭುತ್ವ ರಾಜ್ಯವಿದೆಯೆಂದು ಕಲ್ಪಿಸುವದು ಶುದ್ಧ ತಪ್ಪು. ಲೋಕವಾಣಿಯೇ ಅಂದರೆ ಪಂಚಾಯತ ವಾಣಿಯೇ ದೇವವಾಣಿಯೆಂದು ಹೇಳಬಹುದು. ಆದರೆ ಎಲ್ಲಿ ಇಂಗ್ಲಂಡ ಮತ್ತು ಅಮೇರಿಕಾದಲ್ಲಿರುವಂತೆ ಜನವೆಲ್ಲ ಸೂರೆಮಾಡುವ ಕಾರ್ಯದಲ್ಲಿ ತೊಡಗಿದೆಯೋ ಅಲ್ಲಿ ದೇವವಾಣಿಯು ಹೇಗೆ ಕೇಳ ಬಂದೀತು? ಶ್ವೇತೇತರ ಜನಾಂಗವನ್ನು ಸೂರೆಗೈದು ಅವರು ಜೀವಿಸುವರು. ಲೋಕವಾಣಿಯೇ ದೇವವಾಣಿಯಾಗಿದ್ದರೆ ಪಕ್ಷಪಂಗಡಗಳ ಭೇದಗಳು ಉಳಿಯುತ್ತಿರಲಿಲ್ಲ. ದೇವರ ತಕ್ಕಡಿಯು ಸತ್ಯವನ್ನೂ ಅಹಿಂಸೆಯನ್ನೂ ಸಮನಾಗಿ ತೂಗುವದು. ಇದೇ ನನ್ನ ಉತ್ತರವು. ನನ್ನ ದೃಷ್ಟಿಯಿಂದ ಅಹಿಂಸೆಯು ಊನವಾದದ್ದೂ ಅಲ್ಲ, ದುರ್ಬಲವಾದದ್ದೂ ಅಲ್ಲ. ಅದು ಸರ್ವ ಶಕ್ತಿಯುಳ್ಳದ್ದಾಗಿದೆ. ಅಹಿಂಸೆಯಿದ್ದಲ್ಲಿ ಸತ್ಯವಿದೆ; ಸತ್ಯವೇ ದೇವರು. ದೇವರು ಯಾವ ರೂಪದಲ್ಲಿ ಪ್ರತ್ಯಕ್ಷನಾಗಬಹುದೆಂಬುದನ್ನು ಹೇಳಲಾರೆ. ಆದರೆ ಅವನು ಎಲ್ಲೆಡೆಗೆ ಇರುವನೆಂದೂ ಅವನು ಇದ್ದಲ್ಲಿ ಎಲ್ಲವೂ ಸರಿಹೋಗುವದೆಂದೂ ನನ್ನ ನಂಬಿಗೆ. ಆದ್ದರಿಂದ ಎಲ್ಲರ ಸಲುವಾಗಿ ಒಂದೇ ಒಂದು ಕಟ್ಟಳೆಯುಂಟು. ಜಗತ್ತಿನಲ್ಲಿ ಸತ್ಯ ಅಹಿಂಸೆಗಳಿಗೆ ನೆಲೆಯಿದ್ದರೆ, ಸುಖ ಶಾಂತಿಗಳು ಅಲ್ಲಿ ನೆಲಸಲೇಬೇಕು. ಸುಖ ಶಾಂತಿಗಳು ಎಲ್ಲಿಯೂ ಕಾಣಬರದಿದ್ದರೆ ಸತ್ಯ ಅಹಿಂಸೆಗಳು ಮನುಷ್ಯನಿಂದ ತಾತ್ಪೂರ್ತಿಕವಾಗಿ ದೂರಾಗಿವೆ ಎಂಬುದು ಸ್ಪಷ್ಟವಾಗುತ್ತದೆ. ಆದರೆ ಅವು ಶಾಶ್ವತವಾಗಿ ಅದೃಶ್ಯವಾಗಲಾರವು. ಶ್ರದ್ಧೆಯುಳ್ಳವನು ಈ ವಿಶ್ವಾಸದಿಂದಲೇ ಬಾಳಬೇಕು.

### ವಿದೇಶಿಯರನ್ನು ಸ್ವಾಗತಿಸಬಹುದೊ?

ಪ್ರ:— ಹಿಂದೀಯರಂತೆ ಇಲ್ಲಿ ವಾಸಿಸಬಯಸುವ ವಿದೇಶಿಯರಿಗೆ ಸ್ವತಂತ್ರ ಹಿಂದುಸ್ತಾನವು ಅಂಜಬೇಕಾಗಿಲ್ಲವೆಂದು ನೀವು ಹೇಳುವಿರಿ. ಆದರೆ ಹೀಗೆ ಯಾವ ದೇಶದಲ್ಲಾದರೂ ಶಕ್ಯವಾಗಿದೆಯೆ? ರಾಷ್ಟ್ರೀಯತ್ವಕ್ಕೆ ಮಹತ್ವವಿದ್ದ ದೇಶದಲ್ಲಿ ವಿದೇಶಿಯರ ವಿಷಯವಾಗಿ ನಿಸರ್ಗ ಗರ್ವ ಉಳಿದೇ ಉಳಿಯುವದೆಂಬುದನ್ನು ನೀವು ಒಪ್ಪಬಹುದಲ್ಲವೆ? ಸ್ವತಂತ್ರ ಹಿಂದುಸ್ತಾನವು ಈ ಮಾತಿಗೆ ಹೇಗೆ ಅಪವಾದವಾಗಬಹುದು?

ಉ:— ನಮಗೆ (ವಿದೇಶಿಯರ) ಅಂಜಿಕೆ ಉಳಿಯಲಾರದೆಂಬ ನನ್ನ ವಿಶ್ವಾಸವು ಅಚಲವಾಗಿದೆ. ಇದನ್ನು ಸಿದ್ಧ ಮಾಡಲು ಬಲವಾದ ಆಧಾರಗಳನ್ನು ಕೊಡಲಿಕ್ಕೆ ನನಗೆ ಶಕ್ಯವಿದೆ; ಆದರೆಅದರ ಅವಶ್ಯಕತೆಯು ನನಗೆ ಕಾಣುವದಿಲ್ಲ. ಆದರೆ ದೇಶದ ಜನರೊಳಗೆ ತಾನೂ ಒಬ್ಬನು ಎಂದು ತಿಳಿಯುವ ವಿದೇಶಿಯನಿಗೆ ಇಲ್ಲಿ ಬಂದು ಇರಲು ಸುಸ್ವಾಗತವುಂಟು, ಎಂಬುದನ್ನಷ್ಟೇ ನೆನಪಿನಲ್ಲಿಡಬೇಕು. ಆದರೆ ತಮ್ಮ ಹಕ್ಕುಗಳನ್ನು ರಕ್ಷಣಾ ಸೌಕರ್ಯಗಳಿಂದ ಕಾಯ್ದುಕೊಳ್ಳುವ ವಿದೇಶಿಯರನ್ನು ಹಿಂದುಸ್ತಾನವು ಸಹಿಸಲಾರದು. ಇಂಥವರು ಇಲ್ಲಿ ವರಿಷ್ಠರಾಗಿ ಇರಲು ಬಯಸುತ್ತಾರೆಂಬುನೇ ಇದರ ಅರ್ಥ. ಇದರಿಂದ ತಿಕ್ಕಾಟವು ಬಿಟ್ಟಿದ್ದಲ್ಲ. ಹಿಂದುಸ್ತಾನವು ಸ್ವತಂತ್ರವಾದರೆ ಇಂಗ್ಲಂಡ ಮತ್ತು ಹಿಂದುಸ್ತಾನಗಳ ನಡುವಿನ ತಿಕ್ಕಾಟವು ಉಳಿಯುವದೆಂದು ಭಾವಿಸಲು ಅಶಕ್ಯವಿದೆ. ತಿಕ್ಕಾಟವು ಇರುವವರೆಗೆ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವಿಲ್ಲ.

ಮೋ. ಕ. ಗಾಂಧಿ
( ಮೂಲ ಗುಜರಾಥಿಯಿಂದ )

## ಜನ ಹೆಚ್ಚೋ ಕೃಷಿ ಕಡಮೆಯೊ ?

ಹಿಂದುಸ್ತಾನದಲ್ಲಿ ತಿರುತಿರುಗಿ ಒದಗುತಿರುವ ಬರಗಾಲಗಳಿಗೆ ಜನಸಂಖ್ಯೆಯು ಅತಿರೇಕ ಬೆಳವಣಿಗೆಯೇ ಕಾರಣವೆಂದು ಹೇಳುವದು ಈಚೆಗೊಂದು ಚಟವೇ ಆಗಿಬಿಟ್ಟಿದೆ. ಈ ಸಿದ್ಧಾಂತಕ್ಕೆ ಎಷ್ಟೋ ಪ್ರತಿವಾದಗಳು ಬಂದಿವೆ. ಅದರಲ್ಲಿ ಹೊಣೆ ತಪ್ಪಿಸಿಕೊಳ್ಳುವ ಪ್ರವೃತ್ತಿಯು ಧುಲಕೂ ಇದೆ. ಹಿಂದುಸ್ತಾನದ ಆಹಾರೋತ್ಪಾದನ ಸಾಮರ್ಥ್ಯವನ್ನು ಪೂರ್ತಿಯಾಗಿ ಬೆಳೆಸಿದರೆ ಹೆಚ್ಚುತ್ತಿರುವ ಜನಸಂಖ್ಯೆಯು ಹೊಟ್ಟೆಯನ್ನು ಇನ್ನೂ ಎಷ್ಟೋ ಕಾಲ ಸರಿಯಾಗಿ ತುಂಬಬಹುದೆಂಬ ಬಗ್ಗೆ ಬೇಕಾದಷ್ಟು ಆಧಾರ, ಪ್ರಮಾಣಗಳನ್ನು ಎತ್ತಿ ತೋರಬಹುದು. ಪತ್ರಲೇಖಕನೊಬ್ಬನು ಈ ವಿಷಯದಲ್ಲಿ ನಮ್ಮ ಒಕ್ಕಲತನದ ಕೆಲ ಸ್ಥಿತಿಗತಿಗಳ ಕಡೆಗೆ ಗಮನ ಸೆಳೆದಿದ್ದಾನೆ.

೧) ಸರಕಾರದ ಕೃಷಿಭೂಮಿಗಳಲ್ಲಿ ಮಾಡಿದ ಪ್ರಯೋಗಗಳಿಂದ, ಸುಧಾರಿಸಿದ ಬೀಜಗಳನ್ನು ಬಿತ್ತಿದರೆ ಸದ್ಯದ ಹುಟ್ಟುವಳಿಯನ್ನು ನೂರಕ್ಕೆ ೨೯ ರಷ್ಟು ಹೆಚ್ಚಿಸಬಹುದೆಂದು ತೋರಿಬಂದಿದೆ.

೨) ಎಣ್ಣೆಕಾಳು, ಹಿಂಡಿ, ಎಲುಬು ಮೊದಲಾದವುಗಳ ನಿರ್ಯಾತವನ್ನು ತಡೆದು, ಹಳ್ಳಿಗರ ಅಡುಗೆ ಮೊದಲಾದವುಗಳಿಗಾಗಿ ಕಟ್ಟಿಗೆಯ ಉರವಲನ್ನು ಒದಗಿಸುವ ಮೂಲಕ ಸೆಗಣಿ ಮೊದಲಾದುವನ್ನು ಗೊಬ್ಬರಮಾಡಿ ಹಾಕಿದರೆ, ಸದ್ಯದ ಪೈರಿನ ಉತ್ಪಾದನೆಯನ್ನು ಇಮ್ಮಡಿಸಬಹುದು.

೩) ನೀರಾವರಿ ಕಾಲಿವೆಗಳನ್ನು ಇನ್ನಷ್ಟು ವಿಸ್ತರಿಸುವ ಮತ್ತು ಸಾಕಷ್ಟು ಬಾವಿ ಕೆರೆಗಳನ್ನು ತೋಡುವ ಮೂಲಕ ಈಗ ಒಂದೇ ಬೆಳೆ ಹುಟ್ಟುತಿರುವ ಪ್ರದೇಶಗಳಲ್ಲಿ ಎರಡು ಪೈರುಗಳನ್ನು ತೆಗೆಯಬಹುದು. ಹಿಂದುಸ್ತಾನದ ೨೪೫ ಕೋಟಿ ಎಕರೆ ಕೃಷಿಭೂಮಿಯಲ್ಲಿ ಬರಿ ೩೨ ಕೋಟಿ ಎಕರೆ ಮಾತ್ರ ಎರಡು ಬೆಳೆಗಳನ್ನು ಕೊಡುತ್ತವೆ.

೪) ಹಿಂದುಸ್ತಾನದ ಪ್ರತಿ ಎಕರೆಯ ಹುಟ್ಟುವಳಿಯೊಡನೆ ಬೇರೆ ದೇಶಗಳ ಹುಟ್ಟುವಳಿಯನ್ನು ಹೋಲಿಸಿದರೂ ಇದೇ ಅರ್ಥ ಹೊರಡುತ್ತದೆ.:

ಅಕ್ಕಿಯ ಹುಟ್ಟುವಳಿಯ ಪ್ರತಿ ಎಕರೆಯ ಅಂಕಿಗಳು ಇಂತಿವೆ:

| | | |
|---|---|---|
| ಇಜಿಪ್ತ | ೩೪೪೭ | ಪೌಂಡು |
| ಜಪಾನ | ೩೯೦೯ | ,, |
| ಇಟಲಿ | ೪೮೧೦ | ,, |
| ಫೊರ್ಮೋಸಾ | ೨೪೦೭ | ,, |
| ಹಿಂದುಸ್ತಾನ | ೯೩೯ | ,, |

ಗೋದಿಯ ತತ್ಸಮಾನ ಅಂಕಿಗಳಿವು:

| | | |
|---|---|---|
| ಜಪಾನ | ೨೦೧೦ | ಪೌಂಡು |
| ಇಟಲಿ | ೧೩೭೪ | ,, |
| ಕೆನಡಾ | ೧೧೯೭ | ,, |
| ಇಂಗ್ಲಂಡ್ | ೨೦೪೫ | ,, |
| ಹಿಂದುಸ್ತಾನ | ೭೭೪ | ,, |

೫) ಸರಕಾರಿ ಹೇಳಿಕೆಗಳು ಇನ್ನೂ ಸೂಚಿಸುವದೇನಂದರೆ, ಯೋಗ್ಯ ಉಗ್ರಾಣದ ವ್ಯವಸ್ಥೆಗಳ ಕೊರತೆಯ ಕಾರಣದಿಂದ ಇಲಿ ಹೆಗ್ಗಣ, ಹುಳ ಹುಪ್ಪಡಿ ಮೊದಲಾದವುಗಳ ದಾಳಿಯಾಗಿ ವರ್ಷಕ್ಕೆ ೧೦ ಲಕ್ಷ ಟನ್ ಆಹಾರ ಧಾನ್ಯಗಳು ನಾಶವಾಗುತ್ತವೆ.

೬) ಕೃಷಿಯೋಗ್ಯವಾಗಿದ್ದರೂ ಕೃಷಿ ಮಾಡಲ್ಪಡದಿರುವ ೯ ಕೋಟಿ ಎಕರೆ ಪಡ ಭೂಮಿ ಬಿದ್ದಿದೆ.

೭) ಕೊನೆಯದಾಗಿ “ ವ್ಯಾಪಾರಿ ಪೈರುಗಳು ” ಅಥವಾ “ ಹಣದ ಪೈರುಗಳು ”. ಇಸವಿ ೧೯೦೦ ರಲ್ಲಿ ವ್ಯಾಪಾರಿ ಪೈರುಗಳಿಗೆ ಒಳಗಾಗಿದ್ದ ಭೂಮಿ ೧೬೫ ಲಕ್ಷ ಎಕರೆ. ೧೯೩೦ ರಲ್ಲಿ ಈ ಅಂಕೆ ೨೪೦ ಲಕ್ಷ ಎಕರೆಗೇರಿತು. ಈ ಅವಧಿಯಲ್ಲಿ ಎಣ್ಣೆ ಕಾಳುಗಳನ್ನು ಬೆಳೆಯುತಿದ್ದ ಭೂಮಿಯ ಪ್ರಮಾಣ ೧೩೦ ಲಕ್ಷ ಎಕರೆಯಿಂದ ೧೬೦ ಲಕ್ಷ ಎಕರೆಗೇರಿತು. ೧೯೪೨ ರಲ್ಲಿ ದೇಶದ ಎಣ್ಣೆಕಾಳು



## ಅಕ್ಷಮ್ಯ ಅಪವ್ಯಯ

ಸ್ವಂತ ಅನುಭವದಿಂದ ಬರೆದ ದೀರ್ಘವಾದ ಒಂದು ಪತ್ರದ ಸಾರಾಂಶವನ್ನು ಕೆಳಗೆ ಕೊಡಲಾಗಿದೆ. ಲೇಖಕರು, ಸಂಬಂಧಪಟ್ಟ ಅಧಿಕಾರಿಗಳ , ಅವ್ಯವಸ್ಥೆಯಿಂದಾಗಲೀ, ಅಯೋಗ್ಯ ಆಡಳಿತೆಯಿಂದಾಗಲೀ ಎಷ್ಟು ದೊಡ್ಡ ಪ್ರಮಾಣದಲ್ಲಿ ಧಾನ್ಯವು ಹಾಳಾಗುತ್ತಿರುವದೆಂಬುದನ್ನು ಐದು ಉದಾಹರಣೆಗಳಿಂದ ತೋರಿಸಿದ್ದಾರೆ.

೧. ಸಂಗ್ರಹದ ಬಗ್ಗೆ ಯೋಗ್ಯ ವ್ಯವಸ್ಥೆ ಇಲ್ಲದೆ ಇರುವದರಿಂದ ಇಲಿ, ಹೆಗ್ಗಣ, ಹುಳ ಇವುಗಳಿಂದ ಧಾನ್ಯ ನಾಶವಾಗುವದು.

೨. ಅಂಗಡಿಗಳಲ್ಲಿ, ಗೂಡ್ಸಗಾಡಿಗಳಲ್ಲಿ, ಸ್ಟೇಶನ್ ಪ್ಲಾಟಫಾರ್ಮಿನಲ್ಲಿ ಆಹಾರ ಧಾನ್ಯಗಳನ್ನು ಮಳೆ ಹತ್ತುವಂತೆ ಮುಚ್ಚದೆ ಇಡುವದರಿಂದ.

೩. ವಖಾರಗಳಲ್ಲಿ, ಕಿರಾಣಿ ಅಂಗಡಿಗಳಲ್ಲಿ ಧಾನ್ಯಗಳನ್ನು ಮುಚ್ಚದೇ ಲಕ್ಷಾಂತರ ಹಕ್ಕಿಪಕ್ಷಿಗಳು ಇಡೀ ವರ್ಷ ಕಾಳು ತಿಂದು ಬದುಕುವಂತೆ ರಾಶೀ ಹಾಕಿಡುವದರಿಂದ.

೪. ಹಳೆಯ ಜೀರ್ಣವಾದ ಚೀಲಗಳನ್ನೇ ಧಾನ್ಯ ತುಂಬಲು ಉಪಯೋಗಿಸುವದರಿಂದ ದಾರಿಯಲ್ಲಿ ಕಾಳು ಉದುರಿ ಬಿದ್ದು ಇಲ್ಲವೆ ಚಪ್ಪವಾಗಿ ಕಡಿಮೆಯಾಗುವದರಿಂದ,

೫. ಕಾಳನ್ನು ಸ್ವಚ್ಛ ಮಾಡದೇ ಕೊಳ್ಳುವ ಮಾರುವ ಪ್ರಚಲಿತ ಪದ್ಧತಿಯಿಂದ ಧಾನ್ಯ ಬೆಳೆಯುವವರಿಗೂ, ಕೊಳ್ಳುವವರಿಗೂ ಹಾನಿಯಾಗುವದಿಷ್ಟೇ ಅಲ್ಲ, ಅದರಿಂದ ವಿನಾಕಾರಣ ಸಾರಿಗೆ ವೆಚ್ಚದ ಹಾನಿಯೂ ಬರುವದು.

ಯೋಗ್ಯವಾದ ಧಾನ್ಯ ಭಂಡಾರಗಳಿಲ್ಲದ್ದರಿಂದ ಬರುವ ಹಾನಿಯೇ ೩೫ ಲಕ್ಷ ಟನ್ನುಗಳಷ್ಟಾಗುವದೆಂದು ಮತ್ತು ಉಳಿದ ನಾಲ್ಕು ಕಾರಣಗಳಿಂದಾಗುವ ಹಾನಿಒಟ್ಟಿಗೆ ೧೫ಲಕ್ಷ ಟನ್ನುಗಳಷ್ಟೆಂದೂ ಅಂತೂ ಒಟ್ಟಿನ ಮೇಲೆ ೫೦,೦೦,೦೦೦ ಟನ್ನುಗಳ ನಾಶವು ಪ್ರತಿವರ್ಷ ಆಗುವದೆಂದು ಲೆಕ್ಕ ಮಾಡಲಾಗಿದೆ.

ಸಂಗ್ರಹದ ಯೋಗ್ಯ ವ್ಯವಸ್ಥೆ ಇಲ್ಲದಿರುವದರಿಂದ, ಇಲಿ ಹುಳಗಳು ಧಾನ್ಯದ ಉತ್ತಮ ಭಾಗವನ್ನು ತಿನ್ನಲಾಗಿ ನೂರಕ್ಕೆ ೫—೧೦ ರಷ್ಟು ಧಾನ್ಯದ ತೂಕ ಕಡಿಮೆಯಾಗುತ್ತದಿಷ್ಟೇ ಅಲ್ಲ; ಮಳೆಗಾಳಿಗೆ ಬಿದ್ದ ಧಾನ್ಯದ ಸತ್ವವೂ ಕಡಿಮೆಯಾಗುತ್ತದೆ. ಈ ಬಗ್ಗೆ ಧಾನ್ಯದ ವ್ಯಾಪಾರಿಗಳು ಚಿಂತಿಸುವದಿಲ್ಲ; ಅಧಿಕಾರಿಗಳು ಆಸ್ಥೆ ತೋರಿಸಿದರೂ ಅವರು ಅಸಮರ್ಥರೂ ಆಲಸಿಗರೂ ಇದ್ದಾರೆ. ಪತ್ರ ಬರೆದವರು ಕೆಳಗಿನಂತೆ ಸೂಚಿಸುತ್ತಾರೆ. ಧಾನ್ಯದ ಸಂಗ್ರಹಕ್ಕಾಗಿ ವ್ಯಾಪಾರಸ್ಥರು ಯೋಗ್ಯ ಕಟ್ಟಡಗಳನ್ನು ದೊರಕಿಸಿಕೊಳ್ಳಬೇಕೆಂದು ನಿರ್ಬಂಧಿಸುವ ಕಾನೂನು ಇರಬೇಕು. ಯೋಗ್ಯ ಕಟ್ಟಡವಿಲ್ಲದಿದ್ದರೆ ವ್ಯಾಪಾರಸ್ಥನಿಗೆ ಮಾರುವ ಅಧಿಕಾರವನ್ನಾಗಲಿ ಅಥವಾ ಆ ಅಧಿಕಾರದ ಮುಂದರಿಕೆಯನ್ನಾಗಲಿ ಕೊಡಬಾರದು. ನೆಲವನ್ನೂ ಗೋಡೆಗಳನ್ನೂ ಗಚ್ಚಗಿರಿ ಮಾಡುವದರಿಂದಲೂ ಗೋಡೆಗಳಿಗೆ ಸುಣ್ಣ ಹಚ್ಚಿ, ಜಂತಿಗಳನ್ನು ಸ್ವಚ್ಛಮಾಡಿ ಶುದ್ಧಗೊಳಿಸಿ ಬಾಗಿಲಗಳನ್ನೂ ಇಲಿಗಳು ಬರದಂತೆ ಭದ್ರ ಮಾಡಿ, ಗೋಡೆಗುಂಟ ಸುಟ್ಟ ಇಟ್ಟಂಗಿಯ ತೆಳ್ಳನ್ನ ಕಟ್ಟಿ ಕಟ್ಟುವದರಿಂದಲೂ ಇದ್ದ ವಖಾರಗಳನ್ನು ಧಾನ್ಯ ಸಂಗ್ರಹಕ್ಕೆ ಯೋಗ್ಯವನ್ನಾಗಿ ಮಾಡಿದರೆ ಕೂಡಲೇ ನೂರಕ್ಕೆ ೫೦ ರಷ್ಟು ಹಾನಿಯನ್ನೆ ತಡೆಯಬಹುದು. ಸ್ಥಿರವಾದ ವಖಾರಗಳನ್ನು ಕಟ್ಟಿಸುವ ವಿಷಯದಲ್ಲಿ ಸರಕಾರವೇ ಮುಂದಾಗಿ ಉದಾಹರಣೆ ಹಾಕಿಕೊಡಬೇಕು; ಒಳ್ಳೇ ವಖಾರಗಳಿಂದಾಗುವ ಲಾಭವನ್ನು ಜನರಿಗೆ ತೋರಿಸಬೇಕು.

ಲಾಹೋರ ಮತ್ತು ಲಾಯಲಪೂರ ನಡುವೆ ಸಾವಿರಾರು ಚೀಲ ಗೋದಿಯು ಮುಚ್ಚದೇ ಮೋಟಾರುಗಳಲ್ಲಿಯೂ, ಗಾಡಿ ಹಳಿಗಳ ಮೇಲೆಯೂ ಮಳೆ ಜಡಿಯುತ್ತಿದ್ದಾಗ ಬಿದ್ದದ್ದು ನೋಡಿರುವದಾಗಿ ಲೇಖಕರು ಹೇಳುತ್ತಾರೆ ಆಗಧಾನ್ಯದ ರಕ್ಷಣೆಯ ಜವಾಬುದಾರಿಯುಳ್ಳ ಸ್ಥಾನಿಕ ಅಧಿಕಾರಿಗಳಲ್ಲಿ ಯಾರೂ ಕಾಳು ಹಾಳಾಗುವದನ್ನು ತಡೆಯಲು ಎಳ್ಳಷ್ಟೂ ಪ್ರಯತ್ನ ಮಾಡಲಿಲ್ಲ. ಅಂದಿನ ದಿವಸ ೪೦,೦೦೦ ಮಣ ಗೋದಿ ಹೀಗೆ ಮಳೆಯಲ್ಲಿ ತೊಯಬಿದ್ದಿತು. ಇದನ್ನು ಪತ್ರ ಬರೆದವರು ಪ್ರತ್ಯಕ್ಷ ಕಂಡಿದ್ದಾರೆ. ಇಡೀ ದೇಶದ ತುಂಬ ಬೇರೆ ಬೇರೆ ಸ್ಥಳಗಳಲ್ಲಿಯೂ ಇದೇ ಸ್ಥಿತಿ ಇರುವದು. ಹೊಸ ಚೀಲದಲ್ಲಿ ಚೀಲವನ್ನು ಹಾಕಿ ಅದರಲ್ಲಿ ಧಾನ್ಯ ತುಂಬಿದರೆ ಉದುರಿ ಹಾಳಾಗುವ ಕಾಳನ್ನು ಉಳಿಸಬಹುದು.

ಒಕ್ಕುವ ಸ್ಥಳದಲ್ಲಿಯೇ ಧಾನ್ಯವನ್ನು ಹಸನ ಮಾಡಿಸುವದು ಉಚಿತವೆನಿಸುತ್ತದೆ. ಇದರಿಂದ ಕಾಳು ಬೆಳೆಯುವವನಿಗೆ ತಾನು ಬೆಳೆದ ಕಾಳಿನ ಪೂರ್ಣ ಬೆಲೆ ಸಿಗುವದು. ಉಳಿದ ಸಣ್ಣ ಕಾಳು ನುಚ್ಚು ಇವುಗಳನ್ನು ದನಗಳಿಗೆ, ಕೋಳಿಗಳಿಗೆ ಆವನು ಉಪಯೋಗಿಸಬಹುದು. ಅಲ್ಲದೆ ಸಾರಿಗೆ ಬಗ್ಗೆ ಬರುವ ವೆಚ್ಚದಲ್ಲಿ ಎಷ್ಟೋ ಹಣ ಉಳಿಸಿಕೊಳ್ಳಬಹುದು.

ಸರಕಾರದವರು ಆಹಾರ ಖರೀದಿಯ ಬಗ್ಗೆ ೧೫೦ ಕೋಟಿ ರೂಪಾಯಿ ವೆಚ್ಚ ಮಾಡುತ್ತಿದ್ದಾರೆ. ಇಷ್ಟೇ ಬೆಲೆ ಬಾಳುವ ಆಹಾರ ಧಾನ್ಯವನ್ನು ನಮ್ಮ ದೇಶದಲ್ಲಿ ಹಾಳಾಗಗೊಡುತ್ತಿದ್ದಾರೆ.

ಈ ಪತ್ರದಲ್ಲಿ ಒಂದಕ್ಕಿಂತ ಹೆಚ್ಚು ಸಾರೆ ಈ ಮೊದಲೇ ಟೀಕೆ ಮಾಡಿದಂತೆ ನಮ್ಮ ಮನೆಗಳಲ್ಲಿ ಸ್ವೈರವೃತ್ತಿಯಿಂದ ಆಹಾರ ಹಾಳಾಗುವ ಬಗ್ಗೆಯೂ ಬೆಳೆ ಬೆಳೆಯಬಹುದಾದ ಪ್ರತಿಯೊಂದಂಗುಲ ಭೂಮಿಯಲ್ಲಿ ಹೆಚ್ಚು ಆಹಾರ ಬೆಳೆಯುವ ಬಗ್ಗೆಯೂ ಕೃಷಿಗೆ ಉಪಯುಕ್ತವಾದ ಅಡವಿಯನ್ನು ಕೂಡಲೇ ಸಾಗುಮಾಡಲು ಎಷ್ಟು ದೊರೆಯಬಹುದೆಂಬ ಬಗ್ಗೆ ನಿರೀಕ್ಷಣೆ ಮಾಡುವ ಬಗ್ಗೆಯೂ ನೀರಿನ ಪೂರೈಕೆಯನ್ನು ಭಾವಿಯಿಂದಾಗಲೀ ಬೇರೆ ರೀತಿಯಿಂದಾಗಲೀ ಮಾಡುವಬಗ್ಗೆಯೂ ಲೇಖಕರು ಸೂಚನೆಗಳನ್ನು ಕೊಟ್ಟಿದ್ದಾರೆ. ಅಲ್ಲದೆ ಆಕಳ ಸೆಗಣಿಯನ್ನು ಉರುವಲದಂತೆ ನಗರಗಳಲ್ಲಿ ಉಪಯೋಗಿಸುವದನ್ನು ಕೂಡಲೇ ಪ್ರತಿಬಂಧಿಸುವ ಬಗ್ಗೆಯೂ ಎಲ್ಲ ತರದ ಕಸದಿಂದ ಗೊಬ್ಬರ ತಯಾರಿಸುವ ಬಗ್ಗೆಯೂ ಈ ಸೂಚನೆ ಮಾಡಿದ್ದಾರೆ.

ಹೊಸದಿಲ್ಲಿ ೧೯—೯—೪೬ ಅ. ಕಾ.

ಲೇಖಕರ ಸೂಚನೆಗಳನ್ನು ಕೃತಿಯಲ್ಲಿ ತರಲು ಶಕ್ಯವಿದೆ; ಒಂದು ದೊಡ್ಡ ಗಂಡಾಂತರವನ್ನು ತಪ್ಪಿಸಬೇಕಾದರೆ ಅವುಗಳನ್ನು ಕೃತಿಯಲ್ಲಿ ತರಲೇ ಬೇಕು.

ಮೋ. ಕ. ಗಾಂಧಿ

---

ಮತ್ತು ಸಣಬಿನ ಒಟ್ಟು ಉತ್ಪಾದನೆಯಲ್ಲಿ ನೂರಕ್ಕೆ ೩೨ ರಷ್ಟು ನಿರ್ಯಾತಕ್ಕಾಗಿಯೆ ಇತ್ತು. ಅಗಸಿಯಲ್ಲಿ ನೂರಕ್ಕೆ ೭೧ ರಷ್ಟು ಮತ್ತು ಶೇಂಗಾದಲ್ಲಿ ನೂರಕ್ಕೆ ೧೫ ರಷ್ಟು ನಿರ್ಯಾತವಾಯಿತು. ಬಿಡಿಸಿ ಹೇಳಬೇಕಾದರೆ, ಅಷ್ಟು ಅಂಶ ನೆಲದಸಾರವನ್ನು ಕೇವಲ ವ್ಯಾಪಾರಿ ಲಾಭಕ್ಕಾಗಿ ಮಾರಿದಂತಾಯಿತು. ಅಷ್ಟುಮಟ್ಟಿಗೆ ಭೂಮಿಯಿಂದ ತೆಗೆದುಕೊಂಡಿದ್ದು ಭೂಮಿಗೆ ಯಾವುದೇ ರೂಪದಲ್ಲಿ ಮರಳುವ ಸಂಭವವೇ ಇರಲಿಲ್ಲ. ಫಲಸ್ವರೂಪ, ಭೂಮಿಯ ಸಾರ ಶಾಶ್ವತವಾಗಿ ನಾಶವಾಯಿತು. ಇದು ಒಕ್ಕಲತನವಲ್ಲ, ಮುಂದಿನ ಪೀಳಿಗೆಗಳ ಅನ್ನದ ಅಪಹಾರ. ಈ “ಹಣದ ಪೈರು” ಗಳ ದಾಳಿಯಿಂದ ನಮ್ಮ ಒಕ್ಕಲತನವನ್ನು ಪಾರು ಮಾಡುವದು ಸಾಧ್ಯವಾದರೆ ಮರಮರಳಿ ಬರುತಿರುವ ಆಹಾರ ಕೊರತೆಯನ್ನು ಎದುರಿಸಲು ಬಹಳ ಸಹಾಯವಾಗದಿರದು.

ಹೊಸದಿಲ್ಲಿ — ಪ್ಯಾರೇಲಾಲ
೭—೯—೪೬

ಮೈಸೂರು ಸಂಸ್ಥಾನದಲ್ಲಿ ಸದ್ಯಕ್ಕೆ ರಾಜಕೀಯ ಸುಧಾರಣೆಗಳು ಇಲ್ಲವೆಂದೂ ಈ ಬಗ್ಗೆ ಪ್ರ ಪ್ರ ಮತ್ತು ಶಾಸನ ಸಭೆಗಳ ದಸರಾ ಅಧಿವೇಶನದಲ್ಲಿ ಇದರಿಂದ ಬಿಸಿ ಬಿಸಿ ವಾತಾವರಣವುಂಟಾಗಬಹುದೆಂದೂ ನಿರೀಕ್ಷಿಸಲ್ಪಟ್ಟಿದೆ.

## ಕೈತಪ್ಪಿದ ನಂದನವನ

ವಾಲ್ಮೀಕಿ ಮಂದಿರದಲ್ಲಿ ನನ್ನ ಪುಟ್ಟ ಕೋಣೆಗೆ ಹಿಂಬದಿಯಲ್ಲೊಂದು ಕಿಡಿಕಿಯಿತ್ತು. ಅದರಾಚೆಗೆ ಬಯಲು ಜಾಗೆ. ಕೆಂಪು ಕೋಡುಗಲ್ಲೂ ಒರಟು ಹುಲ್ಲೂ ಅಲ್ಲಿ ಒಂದು ದಿನ್ನೆಯ ಸಾಲನ್ನೆ ಮಾಡಿದ್ದವು. ಅದರಾಚೆಗೆ ವಿಶಾಲ ಆಕಾಶ ಮಾತ್ರ ಕಣ್ಣಿಗೆ ಕಾಣಿಸುತಿತ್ತು. ಇದು ನನಗೆ ನಿರಂತರ ಸುಖದಾಯಕವಾಗಿತ್ತು. ಅದರೊಂದಿಗೆ ಬಾಪೂಜಿಯ ಅಡುಗಳ ಸದ್ದಿಲ್ಲದ ಒಡನಾಟವೂ ಸೇರಿತ್ತು. ಅವುಗಳು ನನ್ನ ಕಿಟಕಿಯ ಬಳಿಬಂದು ನಿಲ್ಲುವ ಅಭ್ಯಾಸವಿಟ್ಟುಕೊಂಡಿದ್ದವು.

ಚಿಕ್ಕ ಹುಡುಗಿಯಾಗಿದ್ದಾಗ ನಾನು ನನ್ನ ಅಜ್ಜನ ಹಳ್ಳಿಯ ಮನೆಯಲ್ಲಿ ಇದ್ದೆ. ಆಗ ನನ್ನ ದಾದಿ ನನ್ನನ್ನು ಮೂರು ಬೇರೆ ಬೇರೆ ದಾರಿಗಳಲ್ಲಿ ಗಾಳಿ ಸವಾರಿಗೆ ಕರೆದೊಯ್ಯುತಿದ್ದಳು. ಒಂದು ರಸ್ತೆಯಿಂದ ನಗರದ ಕಡೆಗೆ, ಇನ್ನೊಂದು ಹಳ್ಳಿಯತ್ತ, ಮತ್ತೊಂದು ಒಂದು ಹೊಲಮನೆಯನ್ನು ಹಾದು ಓಣಿಯ ಮುಖಾಂತರ ಗುಡ್ಡದ ದಿಕ್ಕಿಗೆ. ಅಲ್ಲಿ ಹಕ್ಕಿಗಳು ಹಾಡುತಿದ್ದವು. ಯಾವ ದಾರಿಯಲ್ಲಿ ಗಾಳಿಸವಾರಿ ಹೋಗೋಣೆಂದು ದಾದಿ ನನ್ನನ್ನು ಕೇಳಿದಾಗೆಲ್ಲ ನಾನು “ ಓಣಿಯಿಂದ ಮೇಲೆ ” ಎಂದುತ್ತರಕೊಡುತ್ತಿದ್ದೆ, ಮೇಲೆ ಗುಡ್ಡಕ್ಕೆ-ಅದು ನನ್ನ ಪಾಲಿಗೆ ಆನಂದ ಸೌಂದರ್ಯಗಳ ಆಗರವಾಗಿತ್ತು. ಐವತ್ತು ವರ್ಷಗಳ ನಂತರ, ದಿಲ್ಲಿಯಲ್ಲಿ, “ ಓಣಿಯಿಂದ ಮೇಲೆ ” ಈಗಿಲ್ಲ. ಆದರೆ ಹಳ್ಳಿಗಾಡಿನ ಹೋಲಿಕೆಯೊಂದಾದರೂ ಇರುವದನ್ನು ನೋಡಿ ನನ್ನ ಹೃದಯ ಆ ಪುಟ್ಟ ಕಿಡಕಿಯಿಂದಾಚೆಗೆ, ಮಹಾನಗರದ ಸಂದಣಿ ಗೊಂದಲಗಳಿಂದ ದೂರ, ಬಹಳ ದೂರ ಹಾರುತಿತ್ತು.

ಅಲ್ಲಿಂದ ಹೊರಡುವ ಮುನ್ನಾದಿನ ಏನೋ ಸ್ವಲ್ಪ ಸಾಮಗ್ರಿ ಕೊಳ್ಳಲೆಂದು ಚಾಂದನಿ ಚೌಕಿನ ಕಡೆ ಹೋಗುವ ಅನಿವಾರ್ಯ ಪ್ರಸಂಗವೊದಗಿತು. ಅಲ್ಲಿ ಎಲ್ಲೆಡೆಗಳಿಂದಲೂ ಎಲ್ಲ ಇಂದ್ರಿಯಗಳೂ ನೊಂದುಕೊಳ್ಳುವಂತಾಯಿತು. ವಾಹನಗಳ ಧ್ವನಿಯೂ ಕರ್ಕಶ ಮನುಷ್ಯಸ್ವರಗಳೂ ಕಿವಿಯನ್ನು ಗಡಚಿಕ್ಕಿಸುತಿದ್ದವು. ಕಶ್ಮಲ, ಓರಣಗೇಡಿತನಗಳ ದೃಶ್ಯ ಕಣ್ಣುಗಳನ್ನು ನೋಯಿಸುತಿತ್ತು. ಹೊಲಸು ನಾತ ಮೂಗಿನ ಮೇಲೆ ದಾಳಿಯಿಡುತಿತ್ತು. ಆದರೆ ಎಲ್ಲಕ್ಕಿಂತ ಕೆಡುಕೆನಿಸುದುದು ಜನರ ಮೋರೆಗಳು—ಅವು ಅವರ ಅಂತರಂಗದ ಮೊಂಡಾದ ಪ್ರಜ್ಞೆಯನ್ನೂ ಕಲ್ಲಾದ ಮನಸ್ಸನ್ನೂ ಪ್ರತಿಬಿಂಬಿಸಿದಂತಿದ್ದವು. ಮತ್ತೆ ಇದಂತೆ ನಾಗರಿಕತೆ ! ಇದಕ್ಕೆ ಎದುರಾಡಿದರೆ ಅದು ಹಿನ್ನಡೆಯಂತೆ—ಗಡಿಯಾರದ

—೯ನೇ ಪುಟಕ್ಕೆ





## ಟ್ರಾಕ್ಟರ್ ವಿರುದ್ಧ ಎತ್ತು

ಟ್ರಾಕ್ಟರದಿಂದ ಭೂಮಿಯ ಸಾಗುವಳಿಯನ್ನು ಮಾಡುವ ಬಗ್ಗೆ ವಾದವಿದೆ. ಕೆಲವರು ಯಾಂತ್ರಿಕ ಸಾಗುವಳಿಯೇ ಹಿಂದುಸ್ತಾನಕ್ಕೆ ಆದರ್ಶವೆಂದು ಭಾವಿಸುವರು; ಟ್ರಾಕ್ಟರುಗಳ ಕಡೆಗೆ ಕಣ್ಣೆತ್ತಿ ಕೂಡ ನೋಡದವರೂ ಉಂಟು. ಬೆಳವಣಿಗೆಯ ಕಾಲಕ್ಕೆ ಬೇಕಾಗುವ ಮಧ್ಯಮ ಮಾರ್ಗವೊಂದಿದೆ.

ಸಂಯುಕ್ತಪ್ರಾಂತದಲ್ಲಿ ಸಾಗುವಳಿಗೆ ಯೋಗ್ಯವಾದ ೭೯ ಲಕ್ಷ ಕುರಿಗೆ ಮರಡಿಯ ಭೂಮಿ ತುಂಟು. ಇದರ ಬಹುಭಾಗವು ಪಡಭೂಮಿಯಾಗಿದೆ. ಇದು ಬಹಳ ಬಿರುಸು ಭೂಮಿಯಾಗಿದ್ದು ಕೆಲವು ಕಡೆಗಂತೂ ಸಣ್ಣ ಹರಳುಗಳ ಮೇಲಿನ ಥರವನ್ನು ಕಿತ್ತೊಗೆಯಲು ಆಳವಾಗಿ ನೇಗಿಲ ಹೊಡೆಯುವದು ಅವಶ್ಯವಾಗಿದೆ. ಅದಲ್ಲದೆ ಕರಿಕೆ ಹತ್ತಿದ ಪಡಭೂಮಿಯೂ ಉಂಟು. ತೇರಾಯಿಯಲ್ಲಂತೂ ಗಿಡಗಂಟಿಗಳನ್ನು ಕಿತ್ತೊಗೆದು! ಭೂಮಿಯನ್ನು ಸ್ವಚ್ಛ ಮಾಡಬೇಕಾಗುವದು.

ಎಷ್ಟೋ ವರ್ಷಗಳಿಂದ ಹಿಂದುಸ್ತಾನದ ಪಶುಧನವು ಕ್ಷೀಣವಾಗುತ್ತಿದೆ. ಕಳೆದ ಯುದ್ಧದಲ್ಲಂತೂ ವಿದೇಶೀ ಸೈನಿಕರ (ಆಂಗ್ಲ ಹಾಗೂ ಅಮೇರಿಕನರ) ಮತ್ತು ರಾಜಕೈದಿಗಳ ಆಹಾರದ ಸಲುವಾಗಿ ಮಾಡಲ್ಪಟ್ಟ ಸಾಮುದಾಯಿಕ ಸಂಹಾರದಿಂದ ಅದು ಭಯಂಕರವಾಗಿ ಕಡಿಮೆಯಾಗಿದೆ. ಇಂಥ ಪ್ರಸಂಗದಲ್ಲಿ ಭೂಮಿಯ ಸಾಗುವಳಿಗೆ ಎತ್ತನ್ನೆ ಉಪಯೋಗಿಸಿದರೆ ಕಾಲವ್ಯಯವಾಗಿ ಅದು ನಿರುಪಯುಕ್ತ ಕೂಡ ಎನಿಸಬಹುದು. ಅಡಳಿತೆಗಾರರ ದುರ್ಲಕ್ಷತೆಯಿಂದ ಕೊಡಲಿ ಅನೇಕ ವರ್ಷಗಳ ವರೆಗೆ ತಟ್ಟುತ್ತಿದ್ದ, ಹಾಗೂ ಕೆಲ ನಮ್ಮ ಹಳ್ಳಿಗಳನ್ನು ಹದಗೆಡಿಸುತ್ತಿದ್ದ ಹಾನಿಯನ್ನು ತುಂಬಿಸಿಕೊಳ್ಳಬೇಕಾದರೆ ನಾವು ಆದಷ್ಟು ಬೇಗನೆ ಕೆಲಸವನ್ನು ಕೈಕೊಳ್ಳಬೇಕು.

ಅದ್ದರಿಂದ ವಿಸ್ತಾರ ಕ್ಷೇತ್ರವುಳ್ಳ ಪಡಭೂಮಿಯನ್ನು ಸಾಗು ಮಾಡಲು ಟ್ರಾಕ್ಟರುಗಳನ್ನು ಉಪಯೋಗಿಸಬೇಕೆಂದು ನಾನು ಪ್ರತಿಪಾದಿಸುತ್ತೇನೆ. ಆದರೆ ಒಮ್ಮೆ ಟ್ರಾಕ್ಟರದಿಂದ ಸಾಗುಗೊಳಿಸಿದ ಭೂಮಿಯನ್ನು ಹಾಗೆಯೇ ಯಂತ್ರಗಳ ಸಹಾಯದಿಂದ ಸಾಗಿಸಬೇಕೆಂದು ನಾನು ಎಂದೂ ಹೇಳಲಾರೆ. ಎಲ್ಲ ದೃಷ್ಟಿಯಿಂದ ಎತ್ತು ಹಿಂದೀ ರೈತನಿಗೆ ಲಾಭದಾಯಕವಾಗಿದೆ. ಹೊಲದ ಬೆಳೆಯಲ್ಲಿಯೇ ಅದರ ಮೇವು ದೊರಕುವದು, ಇದಕ್ಕೆ ಪ್ರತಿಯಾಗಿ ಅದು ಗೊಬ್ಬರಕ್ಕೆ ಉರವಲಕ್ಕೆ ಮತ್ತು ಗೋಡೆ ನೆಲಗಳನ್ನು ಸಾರಿಸಲಿಕ್ಕೆ ಅತ್ಯಂತ ಉಪಯುಕ್ತವಾದ ಸೆಗಣಿಯನ್ನು ಪೂರೈಸುವದು. ಇದಲ್ಲದೆ, ಬಂಡಿ, ಯಾತ ಮೊದಲಾದ ಅನೇಕ ಕಾರ್ಯಗಳಿಗೆ ಎತ್ತಿನ ಉಪಯೋಗವುಂಟು. ಟ್ರಾಕ್ಟರದ ಸಲುವಾಗಿ ಪೇಟೆಯಿಂದ ಬಹಳ ಬೆಲೆ ಕೊಟ್ಟು ಎಣ್ಣೆ ತರಬೇಕಾಗುವದು. ಅದರ ಹೊಟ್ಟೆಯಿಂದ ಯಾವ ಉಪಯುಕ್ತ ಪದಾರ್ಥವೂ ಹೊರಬೀಳುವದಿಲ್ಲ. ಬಹಳ ಹಣ ತಿಂದು ಭೂಮಿಯನ್ನು ಸಾಗುಗೊಳಿಸುವದರ ಹೊರತು ಅದು ಬೇರೆ ಕಾರ್ಯ ಮಾಡಲಾರದು.

ಹಳ್ಳಿಗಳಿಗೆ ಉರುವಲ ಪೂರೈಕೆಗಾಗಿ ಗಿಡಗಳನ್ನು ಬೆಳಿಸಿದಾಗ ಭೂ ಸಾಗುವಳಿಯ ಕೆಲಸಕ್ಕೆ ಎತ್ತುಗಳು ಕಡಿಮೆ ಪ್ರಮಾಣದಲ್ಲಿ ದೊರೆಯುವದು ನಮಗೆ ಬೇಕಾಗಿಲ್ಲ. ಹಿಂದುಸ್ತಾನದ ಕಸುವುಗೆಟ್ಟ ಮಣ್ಣಿಗೆ ಶಕ್ತಿ ಕೊಡಲು ಶಕ್ಯವಿದ್ದಷ್ಟು ಹೆಚ್ಚಿಗೆ ಸೆಗಣಿಯು ಬೇಕಾಗಿದೆ. ಹಿಂದುಸ್ತಾನದ ಹಳ್ಳಿಯ ಜೀವನದ ಪರಿಚಯವಿದ್ದ ಪ್ರತಿಯೊಬ್ಬನಿಗೂ ಸೆಗಣಿಯ ಮಹತ್ವ ಗೊತ್ತಿರುವದು. ಶಗಣಿ ಇಲ್ಲವಾದರೆ ಹಳ್ಳಿಯ ಮನೆಮಾರುಗಳು ಆರ್ಥಿಕ ಜೀವನ ಹಾಳಾಗಿ ಹೋಗುವವು.

ಅದುದರಿಂದ ಟ್ರಾಕ್ಟರಗಳನ್ನು ಕೇವಲ ದೊಡ್ಡ ಪ್ರಮಾಣದಲ್ಲಿ ಹೊಸ ಭೂಮಿಯನ್ನು ತಯಾರು ಮಾಡಲು ಉಪಯೋಗಿಸಬಹುದು. ಉತ್ತಮ ಸಾಗುವಳಿಯ ಸ್ಥಿತಿಗೆ ಈ ಹೊಸ ಭೂಮಿಯು ಬರುವ ವರೆಗೆ ಪ್ರಾಂತದಲ್ಲಿಯ ಡನಗಳ ಪೀಳಿಗೆಯ ಸುಧಾರಣೆಯ ಬಗ್ಗೆ ಎಲ್ಲ ರೀತಿಯಿಂದ ಪ್ರಯತ್ನ ಮಾಡಬೇಕು. ಅದರಿಂದ ಒಳ್ಳೇ ಎತ್ತುಗಳು ಒಕ್ಕಲತನಕ್ಕೆ ಬೇಕಾಗುವಷ್ಟು ದೊರೆಯುವವು.

ಈ ಲೇಖವನ್ನು ಮುಗಿಸುವ ಪೂರ್ವದಲ್ಲಿ ಟ್ರಾಕ್ಟರಗಳ ಉಪಯೋಗದ ಬಗ್ಗೆ ಎಚ್ಚರಿಕೆ ಕೊಡಬಯಸುತ್ತೇನೆ. ಸದ್ಯಕ್ಕೆ ಟ್ರಾಕ್ಟರುಗಳು ಪರದೇಶಗಳಿಂದ ದೊರೆಯುತ್ತವೆ. ಇದರಿಂದ ಅವುಗಳಿಗೆ ಬೇಕಾಗುವ ಬಿಡಿ ಭಾಗಗಳು (ಮೊದಲು ಕೊಟ್ಟವು ನಿರುಪಯುಕ್ತವಾದ ನಂತರ) ಸಿಗುವದೇ ದುರ್ಲಭ. ಸಿಕ್ಕರೂ ಬಹಳ ಬೆಲೆ ಬೀಳುವವು. ಇಂದು ಹಿಂದುಸ್ತಾನದಲ್ಲಿ ತಜ್ಞ ಇಂಜನೀಯರರೂ ಯಂತ್ರಜ್ಞರೂ ಸಿಗುವದು ಕಠಿಣ. ಇದರಿಂದ ಯಾವದಾದರೂ ದೊಡ್ಡ ಯೋಜನೆಗೆ ಕೈಹಾಕುವ ಮೊದಲು ಇಂಥ ಕೆಲಸ ಕೈಕೊಳ್ಳಲು ಜನರಿಗೆ ತಕ್ಕ ಶಿಕ್ಷಣ ಕೊಡಬೇಕು. ಹೊಸ ಭೂಮಿ ಸಾಗುವಳಿ ಮಾಡುವ ಸಮೀಪದಲ್ಲಿಯೇ ಸ್ಥಾನಿಕ ವರ್ಕಶಾಪ್ ತೆರೆಯಬೇಕು. ಇಷ್ಟು ಮೇಲಿನ ಮಾತಿನಿಂದ ತಿಳಿದುಬರಬಹುದಾಗಿದೆ.

ಟ್ರಾಕ್ಟರದಿಂದ ಭೂಸಾಗುವಳಿ ಮಾಡಲು ತೊಂದರೆಯ ವಿಷಯವೆಂದರೆ ಸಾಗುವಳಿಗೆ ಬೇಕಾಗುವ ಸಾಧನ ಸಾಮುಗ್ರಿಗಳು. ಯಾಕಂದರೆ ಅವು ಮೇಲಿಂದ ಮೇಲೆ ನಿರುಪಯೋಗಿಯಾಗುವದೂ ಮುರಿಯುವದೂ ಉಂಟು. ನಾವು ಸಾಧನ ಸಾಮುಗ್ರಿಗಳ ಬಗ್ಗೆ, ಅವುಗಳ ಬಿಡಿ ಭಾಗಗಳ ಬಗ್ಗೆ, ಪರದೇಶದವರ ಮೇಲೆ ಕೈಯ್ಯೂರಿ ನಿಲ್ಲುವದಾದರೆ ಟ್ರಾಕ್ಟರದಿಂದ ಭೂಮಿಯನ್ನು ಸಾಗು ಮಾಡುವದು ನಿಶ್ಚಯವಾಗಿಯೂ ಅಯಶಸ್ವಿಯಾಗುವದು. ಟ್ರಾಕ್ಟರ ಸಾಗುವಳಿಗೆ ಬೇಕಾಗುವ ಸಾಧನ ಸಾಮುಗ್ರಿಗಳನ್ನು ಹಿಂದುಸ್ತಾನದಲ್ಲಿಯೇ ಮಾಡಬಹುದು. ಅವುಗಳನ್ನು ಮಾಡಲು ತಪ್ಪಿದರೆ, ನಮಗೆ ಸ್ವದೇಶೀ ವಸ್ತುಗಳ ಬಗ್ಗೆ ಸಾಕಷ್ಟು ಕಳಕಳಿ ಇಲ್ಲವೆಂಬ ಆರೋಪಕ್ಕೆ ಎಡೆಯಾಗಬಹುದು. —ಎಸ್.

## ನಂದನವನ

—೮ ನೇ ಪುಟದಿಂದ

ಮುಳ್ಳನ್ನು ಹಿಂದೆ ತಿರುಗಿಸುವದಂತೆ.“ಚಾಂದನಿ ಚೌಕು ಹೊಲೆಗೇರಿಯಲ್ಲ ಮತ್ತೆ—ಅದು ಹಿರಿಯ ರಾಜಮಾರ್ಗಗಳಲ್ಲೊಂದೆಂದು, ಅಂಗಡಿ ಬೀದಿಯೆಂದು ಹೆಸರಾಗಿದೆ.

ಅಂದು ಸಂಜೆ ನಾನು ಡೆಹರಾದನದ ಗಾಡಿ ಹತ್ತಿದೆ. ಉಷಃಕಾಲದಲ್ಲಿ ಗಾಡಿಯ ಕಿಡಕಿಯಿಂದ ಹೊರಗೆ ಹಣಕಿದಾಗ ನನ್ನ ಸುತ್ತ ನಂದನವನವೇ ಹಬ್ಬಿದ್ದಂತೆ ಭಾಸವಾಯಿತು. ಹೊಸ ತಂಗಾಳಿ ತೀಡುತಿತ್ತು, ಅಡವಿಗಳು ಶಾರದ ಶ್ಯಾಮಲತೆಯಿಂದ ಮೆರೆಯುತಿದ್ದವು—ಅಷ್ಟರಲ್ಲಿ ಕಲ್ಲು ಹಾದಿಯಲ್ಲಿ ಕುಣಿಯುತ್ತ ಹೊಳೆಯುತ್ತ ಝರಿಯೊಂದು, ದಂಡೆಗೆ ಬೆಳೆದಿದ್ದ ಹೊದರುಗಳನ್ನೂ ದರ್ಭೆಯ ಗುಚ್ಛಗಳನ್ನೂ ದಾಟಿ ದಾಟಿ ಕಲಕಲದೊಡನೆ ಹರಿಯುತಿರುವದು ಕಂಡಿತು. ಅದನ್ನು ದಾಟಿ ಒಂದು ಅಗಲಾದ ಕಣಿವೆ ಪೂರ್ವದಿಕ್ಕಿನಲ್ಲಿ ಪರ್ವತದ ನೆತ್ತಿಯ ಮೇಲೆ ಸೂರ್ಯ ಮೂಡಿದ್ದ. ಅದನಿಯ ಎಡೆಯಿಂದ ಸ್ವರ್ಣ ಪ್ರಭೆಯ ಥಳಕು ಚಿಮ್ಮಿ ಹರಿದ್ವಾರದ ಕಡೆ ಹರಿದಿರುವ ಗಂಗಾಮಾತೆಯ ಸಕೃದ್ದರ್ಶನವನ್ನು ಕೊಟ್ಟಿತು. ಬನದ ಹಕ್ಕಿಗಳೊಡನೆ ನನ್ನ ಹೃದಯವೂ ಕೃತಜ್ಞತೆಯಿಂದ ಪರಮಾತ್ಮನನ್ನು ಹಾಡಿಹಾಡಿ ಕೊಂಡಾಡಿತು.”

ಆಗ ನಾನು ಚಾಂದನೀ ಚೌಕಿನ ನಗರವಾಸಿಗಳನ್ನೂ ಅವರನ್ನು ಬಳಿಸಿದ ವಿಕೃತಿಯನ್ನೂ ನೆನೆದುಕೊಂಡೆ. ಈ ಸೌಂದರ್ಯಕ್ಕಿಂತ ಅದನ್ನೇ ಮೆಚ್ಚುವ ಅಧೋಗತಿಗೆ ಅವರು ಇಳಿದಿದ್ದಾರೆಯೇ? ನಿಸರ್ಗರೂಪಿ ಪರಮಾತ್ಮನನ್ನು ಕಾಣುವ ಕಣ್ಣನ್ನು ಅವರು ಕಳೆದುಕೊಂಡಿದ್ದಾರೆಯೆ? ನೀರವದ ಧ್ವನಿಯಮಾತು ಒತ್ತಟ್ಟಿಗಿರಲಿ, ಹಕ್ಕಿಗಳ ಹಾಡಿನಲ್ಲಿರುವ ಸಂಗೀತವನ್ನು ಆಲಿಸಲಾರದಷ್ಟು ಅವರ ಕಿವಿಗಳು ಕಿವುಡಾಗಿ ಹೋಗಿವೆಯೇ ? ಅವರ ಮೂಗು ಪರ್ವತದ ಸೌರಭಕ್ಕಿಂತ ನಗರದ ದುರ್ಗಂಧಕ್ಕೇ ಮನಸೋತಿದೆಯೇ ? ನಾನು ನನ್ನ ಜತೆ ಪ್ರವಾಸಿಗಳ ಕಡೆ ಕಣ್ಣುತಿರುಗಿಸಿದೆ. ಆ ಇಬ್ಬರು ಯುವಕರಲ್ಲಿ ಒಬ್ಬನು ಒಂದು ಮೂಲೆ ಹಿಡಿದು ಸಿಗರೇಟು ಸೇದುತಿದ್ದನು. ಮಸೂರಿಗೆ ಹೋದ ಕೂಡಲೆ ಸಿನೇಮಾ ಗೃಹವನ್ನು ಹುಡುಕಿಕೊಂಡು ಹೋಗಿ ಅಶ್ಲೀಲ ಸಂಗೀತದ ತಾಳಕ್ಕೆ ಪರದೆಯ ಮೇಲೆ ಕುಣಿಯುವ ವಿದೇಶಿದೃಶ್ಯಗಳಿಗೆ , ಮನಸನ್ನು ಸೂರೆ ಬಿಡುವವರಿವರೆಂದು ಎಣಿಸಿಕೊಂಡೆ. ಕೇದಾರನಾಥದ ಉತ್ತುಂಗ ಹಿಮಶಿಖರಗಳನ್ನು ಗೌರವ ಬುದ್ಧಿಯಿಂದ ನೋಡುವದಾಗಲಿ ವನಗಿರಿಗಳಲ್ಲಿ ಸುತ್ತಿ ಸುಳಿಯುವ ಗಾಳಿಯ ನಾದಗಳಿಗೆ ಕಿವಿಗೊಡುವದಾಗಲಿ ಅವರಿಗೆ ಸೇರದ ಮಾತು.

ಅಯ್ಯೋ ಆಧುನಿಕ ಮನುಷ್ಯನೇ ! ಅವನಿಗೊಂದು ಘನರೋಗ ಅಂಟಿಕೊಂಡಿದೆ. ಆದರೆ ಅವನು ಅದರಲ್ಲೇ ದೊಡ್ಡ ಘನತೆಯನ್ನು ಕಾಣುತ್ತಾನೆ. ಅದಕ್ಕೇ ಪ್ರಗತಿ, ತಿಳಿವಳಿಕೆ, ಜ್ಞಾನ ಎಂದು ಹೆಸರಿಡುತ್ತಾನೆ.

೯—೯—೪೬ —ಮೀರಾಬೇನ

## ಜೇಲುಗಳಿಗೆ ಸೂಚನೆಗಳು

ಹಿಂದೆ ಜೇಲ ಸುಪರಿಂಟೆಂಡೆಂಟರಾಗಿದ್ದ ಒಬ್ಬ ಮಿತ್ರರು ಕೆಳಗಿನ ಸೂಚನೆಗಳನ್ನು ಕಳಿಸಿದ್ದಾರೆ. ಈ ಸೂಚನೆಗಳು ಈಗಿನ ಆಹಾರ ಹಾಗೂ ಬಟ್ಟೆಗಳ ಕೊರತೆಯನ್ನು ನೀಗಿಸುವ ಬಗ್ಗೆ ವಿಚಾರಾರ್ಹವಾಗಿವೆ—

೧. ಎಲ್ಲ ಜೇಲುಗಳಲ್ಲಿ, ಸನ್ಮಾರ್ಗ ಶಿಕ್ಷಣ ಶಾಲೆಗಳಲ್ಲಿ, ಹುಚ್ಚರ ಆಸ್ಪತ್ರೆಗಳಲ್ಲಿ, ಸಣ್ಣ ವಯಸ್ಸಿನ ಅಪರಾಧಿಗಳ ಸನ್ಮಾರ್ಗದರ್ಶಕ ಬಂಧನಾಲಯಗಳಲ್ಲಿ, ಬಿತ್ತಲು ಯೋಗ್ಯವಾಗಿರುವ ಪ್ರತಿಯೊಂದು ತುಂಡು ಭೂಮಿಯಲ್ಲಿ ಕಂದಮೂಲಗಳನ್ನು— ಉದಾಹರಣಾರ್ಥ ಬಟಾಟಿ, ಗೆಣಸು, ಗಜ್ಜರಿ, ಮೂಲಂಗಿ—ಬೆಳೆಯಬೇಕು. ಇವುಗಳಲ್ಲಿ ಕ್ಯಾಲ್ಸಿಯಮ್, ಧಾತುಸತ್ವಗಳು, ಜೀವನಸತ್ವಗಳೂ ಸಮೃದ್ಧವಾಗಿ ಇರುವವು. ಆದುದರಿಂದ ಒಪ್ಪೊತ್ತಿನ ಊಟದಲ್ಲಿ ಅಕ್ಕಿ ಅಥವಾ ಗೋದಿಯ ಬದಲು ಉಪಯೋಗಿಸಬಹುದು.

೨. ಮುಂಜಾವು ಹಾಗೂ ಸಾಯಂಕಾಲದ ಊಟದ ವೇಳೆಗಳ ನಡುವಿನ ಅಂತರವನ್ನು ಹೆಚ್ಚುಮಾಡಿ, ಬೆಂದ ಆಹಾರದ ಅಪವ್ಯಯವಾಗದಂತೆ ನೋಡಿಕೊಳ್ಳಬಹುದು. ಕೈದಿಯ ಸಂಗಡ ಮಾತಾಡಿ ಎರಡೇ ಊಟ ಮಾಡುವದಕ್ಕೆ ಒಪ್ಪಿಸಿ ಹಾಗೆ ಮಾಡಬಹುದು.

೩. ಒಳ್ಳೇ ಕೈದಿಗಳನ್ನು ಜೇಲು ಅಧಿಕಾರಿಗಳ ಖಾಸಗಿ ಸೇವೆಯಿಂದ ಬಿಡಿಸುವದು.

೪. ಪೇಟೆಯಲ್ಲಿ ಕೊಳ್ಳುವ ಆಹಾರ ಬಟ್ಟೆ ಇವುಗಳ ಪ್ರಮಾಣ ಕಡಿಮೆ ಮಾಡಬೇಕು. ಈ ಕಾರಣದಿಂದ ಹತ್ತಿ ಮತ್ತು ತಿನ್ನುವ ಪದಾರ್ಥಗಳ ಬೆಳವಣಿಗೆಗೆ ಹೆಚ್ಚು ಲಕ್ಷ್ಯಕೊಡಬೇಕು ಮತ್ತು ಆಸಕ್ತಿಪೂರ್ವಕ ಬೆಳೆಗಳ ನಿರೀಕ್ಷಣೆ ಮಾಡಬೇಕು.

೫. ಜೇಲುಗಳಲ್ಲಿ ಆದರ್ಶ ದುಗ್ಧಾಲಯಗಳನ್ನು ಸ್ಥಾಪಿಸಬೇಕು. ಜೇಲು ಅಧಿಕಾರಿಗಳಿಗೆ ಆಕಳು ಸಾಕಲು ಅಪ್ಪಣೆ ಕೊಡಬಾರದು. ಆದರೆ ಅಧಿಕಾರಿಗಳಿಗೆ ಜೇಲಿನ ದುಗ್ಧಾಲಯದಿಂದ ಹಾಲು ಕೊಳ್ಳಲು ಅಪ್ಪಣೆ ಕೊಡಬೇಕು.

೬. ಒಕ್ಕಲತನ, ಪಶು ಧನ, ಉದ್ಯೋಗ, ಪಶುಚಿಕಿತ್ಸೆ ಮೊದಲಾದ ಬೇರೆ ಬೇರೆ ಖಾತೆಗಳಲ್ಲಿ ಇಂದು ಸಹಕಾರವಿಲ್ಲ, ಇನ್ನು ಮುಂದೆ ಸಹಕಾರದಿಂದ ಕೆಲಸ ಮಾಡುವಂತೆ ಮಾಡಬೇಕು.

೭. ಅತ್ಯವಸರ ಕಾಲದಲ್ಲಿ ಬೇಕೆಂದು ಜೇಲಿಗೆ ಕೊಟ್ಟ ಭೂಮಿಯ ಸಂಪೂರ್ಣ ಉಪಯೋಗ ಮಾಡಬೇಕು.

೮. ಗೋಶಾಲೆಗಳಿಂದ ಹುಟ್ಟುವ ಗೊಬ್ಬರ ನಾಶವಾಗದಂತೆ (Compost System) ಕಂಪೊಸ್ಟ ಪದ್ಧತಿ ಅನುಸರಿಸಬೇಕು.

೯. ಪ್ರತಿಯೊಂದು ಸಸ್ಥೆಯು ತನ್ನ ವಠಾರದಲ್ಲಿದ್ದ ಬೈಲು ಜಾಗೆಯಲ್ಲಿ ದನಗಳಿಗೆ ಮೇವು ಬೆಳಸಬೇಕು. ಸದ್ಯಕ್ಕೆ ಹೆಜ್ಜೆ ಹೆಜ್ಜೆಗೆ ಜೇಲಿನ ಆಡಳಿತೆಯಲ್ಲಿರುವ ದುರುಪಯೋಗ ಇಲ್ಲದಂತಾಗಬೇಕು.

## ಪಶು ಧನ

ದನಗಳ ಸಮಸ್ಯೆಯನ್ನು ಬಿಡಿಸುವ ಪ್ರಯತ್ನ ಜೋರಿನಿಂದ ಮಾಡದಿದ್ದರೆ ಹಿಂದುಸ್ತಾನದ ಭೂ ಸುಧಾರಣೆಯು ಗ್ರಾಮ ಪುನರ್ಘಟನೆಯು ಯಾವ ಯೋಜನೆಯೂ ಯಶಸ್ವಿಯಾಗಲಾರದು. ಯುದ್ಧದಲ್ಲಿ ಆಕಳು ಹಾಗು ಎತ್ತುಗಳು ಪರದೇಶದ ಸೈನಿಕರ, ಹಾಗೂ ರಾಜಕೈದಿಗಳ ಹೊಟ್ಟೆಗೆ ಬೇಕಾಗುವ ಮಾಂಸವನ್ನು ಒದಗಿಸಲು ವಿಶೇಷವಾಗಿ ಸಂಹಾರವಾಗಿವೆ. ಈ ಮೊದಲೇ ಇರುವ ದನಗಳ ದುಸ್ಥಿತಿ ಇದರಿಂದ ಹೆಚ್ಚು ಗಂಭೀರ ಮಟ್ಟವನ್ನು ಮುಟ್ಟಿದೆ.

ದನಗಳನ್ನು ಒಂದೇ ದಿನದಲ್ಲಿ ಬೆಳೆಸಲಾಗುವದಿಲ್ಲ. ಹೇಳಿಕೊಳ್ಳುವಷ್ಟು ಕೆಲಸವಾಗಬೇಕಾದರ ಕನಿಷ್ಠ ನಾಲ್ಕೈದು ವರ್ಷಗಳನ್ನಾದರೂ ಕಳೆಯಬೇಕಾಗುವದು. ಆದುದರಿಂದ ಈ ಕೆಲಸವನ್ನು ನಾವು ಕೂಡಲೇ ಕೈಕೊಳ್ಳುವದು ಉಚಿತವಾಗಿದೆ. ಆದರೆ ದುರ್ದೈವದಿಂದ ಕಾಲಹರಣವೇ ಈ ದೇಶದಲ್ಲಿ ಒಂದು ರೂಢಿಯಾಗಿ ಹೋಗಿದೆ. ದನಕರುಗಳ ಬೆಳವಣಿಗೆಯ ಕೆಲಸವು ಯಶಸ್ವಿಯಾಗಬೇಕಿದ್ದರೆ ಸರಕಾರೀ ಅಧಿಕಾರಿಗಳು ಹೊಸ ಹುರುಪಿನಿಂದ ಈ ಕಾರ್ಯ ಕೈಕೊಳ್ಳಬೇಕು. ಒಂದು ವೇಳೆ ದನಕರುಗಳ ಬೆಳವಣಿಗೆಯಾಗದಿದ್ದರೆ, ಹಳ್ಳಿಯ ಉಳಿದ ಬೆಳವಣಿಗೆ ತನ್ನಿಂದ ತಾನೇ ಕುಂಠಿತವಾಗುವದು.

ಪ್ರಾಂತಿಕ ಹಾಗು ಕೇಂದ್ರ ಸರಕಾರಗಳು ಸರಿಯಾಗಿ ಅರ್ಧ, ಅರ್ಧ ವೆಚ್ಚ ಕೊಡಲು ಒಪ್ಪಿ, ಸುಧಾರಿಸಿದ ದನಗಳ ಪೀಳಿಗೆಯನ್ನು ಬೆಳಸುವ ಬಗ್ಗೆ ಅಲ್ಲಲ್ಲಿ ಗೋಶಾಲೆಗಳನ್ನು ಸಂಘಟಿಸುವ ಯೋಜನೆಯನ್ನು ಗೊತ್ತುಮಾಡಿ ಸ್ವೀಕರಿಸಿವೆ. ಈ ಯೋಜನೆಯನ್ನು ಯೋಗ್ಯ ರೀತಿಯಿಂದ ಕಾರ್ಯರೂಪಕ್ಕಿಳಿಸಿದರೆ, ಯೋಗ್ಯ ದಿಶೆಯಲ್ಲಿ ಸಾಗಿದಂತಾಗುವದು. —ಮೀರಾಬೆನ್

## ಹಿಂದುಸ್ತಾನಿ ಸೇವಾದಲದ ಪುನರುಜ್ಜೀವನ

### ಡಾ. ಹರ್ಡಿಕರರೊಡನೆ ವಿಚಾರ ವಿನಿಮಯ

ಹಿಂದುಸ್ತಾನಿ ಸೇವಾದಲದ ಸಂಸ್ಥಾ[illegible] ಡಾ[illegible] [illegible] ಎಸ್. ಹರ್ಡೀಕರರು ದಿಲ್ಲಿಯಲ್ಲಿ ಆ ಸಂಸ್ಥೆಯ ಪುನರುಜ್ಜೀವನದ ಸಂಬಂಧವಲ್ಲಿ ಮೇಜರ ಜನರಲ್ ಶಾ ನವಾಜರೊಡನೆ ವಿಚಾರ ವಿನಿಮಯ ನಡೆಸಿದ್ದಾರೆ. ಪಂಡಿತ ನೆಹರೂ ಅವರು ಹರ್ಡಿಕರರೊಡನೆ ಚಿಕ್ಕ ಮಾತುಕತೆ ನಡೆಸಿದ್ದಲ್ಲದೆ ಕಾಂಗ್ರೆಸ್ ಸಮಿತಿಗಳ ಅಧ್ಯಕ್ಷ ಕಾರ್ಯದರ್ಶಿಗಳು ಮತ್ತು ಸ್ವಯಂಸೇವಕ ಪ್ರತಿನಿಧಿಗಳ ಸಮ್ಮೇಲನದಲ್ಲಿ ಭಾಷಣ ಮಾಡಿ ಸ್ವಯಂಸೇವಕರ ಕೇಂದ್ರಿಕೃತ ಪುನಸ್ಸಂಘಟನೆಗೆ ಇದೀಗ್ಗಗಳಿಗೆ ಯೊದಗಿದೆಯೆಂದುಸ್ತುತಿದ್ದರು. ಹಿಂದುಸ್ತಾನಿ ಸೇವಾದಲವನ್ನೆ ಪುನರುಜ್ಜೀವನಗೊಳಿಸಬೇಕೆಂದೂ ಹೆಸರು ಬೇರಾವ ಹೆಸರಿನಷ್ಟೆ ಚನ್ನಾಗಿದೆಯೆಂದೂ ಅವರ ಅಭಿಪ್ರಾಯವಾಗಿತ್ತು. ಹರ್ಡೀಕರರು ಈ ವಿಷಯದಲ್ಲಿ ಆಸ್ಥೆ ವಹಿಸಿದ್ದಕ್ಕೆ ಅವರು ಸಂತೋಷಪಟ್ಟು, ಕೇಂದ್ರೀಕೃತ ಸಂಘಟನೆಯಲ್ಲಿ ಸ್ವಯಂಸೇವಕರು ದೇಶಸೇವೆ ಮಾಡಬೇಕೆಂದೂ ಹಳ್ಳಿಗಳಿಗೆ ಹೋಗಿ ಜನರನ್ನು ಆತ್ಮರಕ್ಷಣೆ, ನಾಗರಿಕ ಜೀವನ, ಸಾಮಾಜಿಕ ಜೀವನಗಳಲ್ಲಿ ತರಬೇತಿಗೊಳಿಸಬೇಕೆಂದೂ ಉಪದೇಶಿಸಿದರು. ಸಮ್ಮೇಲನದ ಅಧ್ಯಕ್ಷರಾಗಿದ್ದ ಡಾ. ಹರ್ಡೀಕರರು ತಮಗೆ ಸ್ವಯಂಸೇವಕರಲ್ಲಿದ್ದ ಆಸ್ಥೆ ಎಂದೂ ಕುಂದಿದ್ದಿಲ್ಲವೆಂದೂ ಸ್ವಯಂಸೇವಕತ್ವವೇ ತಮ್ಮ ಜೀವನಧ್ಯೇಯವಾಗಿರುವದರಿಂದ ಈ ಕೆಲಸದಲ್ಲಿ ತಾವು ಸಾಮಾನ್ಯ ಸ್ವಯಂಸೇವಕನಾಗಿ ಸೇವೆ ಮಾಡಲು ಸಿದ್ಧರಾಗಿರುವೆನೆಂದೂ ಸಾರಿದರು.

ಈ ವಿಷಯದಲ್ಲಿ ತಜ್ಞರ ಸಮಿತಿಯೊಂದು ರಚಿಸಲ್ಪಟ್ಟದ್ದು ಅವರು ತಮ್ಮ ಕೊನೆಯ ಸಲಹೆಗಳನ್ನು ಕಾಂಗ್ರೆಸ್ ಕಾರ್ಯಸಮಿತಿಗೊಪ್ಪಿಸಿದ್ದಾರೆ.

ಸ್ವಯಂಸೇವಕ ಸಂಘಟನೆಯ ಕೆಲಸವನ್ನು ಸುಭಾಸ ಸೇನೆಯ ಪ್ರಸಿದ್ಧ ಮೇ. ಜ. ಶಾನವಾಜರಿಗೆ ಕಾಂಗ್ರೆಸ್ ಕಾರ್ಯಸಮಿತಿ ಒಪ್ಪಿಸಿದ್ದುದ್ದು ವಾಚಕರ ನೆನಪಿನಲ್ಲಿರಬಹುದು.

## ಕುಷ್ಠರೋಗ ಮತ್ತು ಸೋಂಕು

ವೆಲ್ಲೂರಿನ ಖ್ರಿಶನರಿ ಮೆಡಿಕಲ್ ಕಾಲೇಜಿನ ಪ್ರಿನ್ಸಿಪಾಲರಾದ ಡಾ. ಆರ್. ಜಿ. ಕಾಕ್ರೇನರು ಬರೆಯುತ್ತಾರೆ.

"ನನ್ನ ಮಿತ್ರ ಜಗದೀಶನ್ನರು ಮದ್ರಾಸಿನ ಹಿಂದೂ ಪತ್ರಿಕೆಯ ಅಗಸ್ಟ ೨೬ರ ಸಂಚಿಕೆಯಲ್ಲಿ ಪ್ರಕಟವಾದ ಒಂದು ಸಮಾಚಾರವನ್ನು ನನ್ನ ಗಮನಕ್ಕೆ ತಂದಿದ್ದಾರೆ. ಅದು ಹೀಗಿದೆ:- 'ಬಿಹಾರದಲ್ಲಿ ಕುಷ್ಠರೋಗಿಗಳಿಗಾಗಿ ಬೇರೆಯೇ ಒಂದು ಸೆರೆಮನೆಯನ್ನು ತೆರೆಯುವರೆಂದು ತಿಳಿಯುತ್ತದೆ. ಉಳಿದ ಸೆರೆಯಾಳುಗಳನ್ನು ಆ ರೋಗದ ಸೋಂಕಿನಿಂದ ರಕ್ಷಿಸುವದೇ ಇದರ ಉದ್ದೇಶ. ಮೊಟ್ಟಮೊದಲು ಇಂಥ ಸುಮಾರು ನೂರು ಕೈದಿಗಳನ್ನು ಮಣಭೂಮಿ ಜಿಲ್ಹೆಯ ಗೋವಿಂದಪುರದಲ್ಲಿ ಕೂಡಹಾಕುವ ವ್ಯವಸ್ಥೆಗಳು ಪ್ರಾರಂಭವಾಗಿವೆಯಂತೆ. ಈ ಸುದ್ದಿಯನ್ನೋದಿ ನನಗೆ ಅತಿಶಯ ವೇದನೆಯಾಯಿತು. ಆದರಿಂದ, ಕುಷ್ಠರೋಗಿಗಳ, ಏಕೆ ಸಮಾಜದಿಂದ ಅನ್ಯಾಯವಾಗಿ ದೂರೀಕರಿಸಲ್ಪಟ್ಟ ಎಲ್ಲರ ನಿರಂತರ ಬೆಂಬಲಿಗರಾದ ನಿಮಗೆ ಈ ವಿಷಯದಲ್ಲಿ ಬರೆಯದೆ ಇರುವದು ನನ್ನಿಂದಾಗಲಿಲ್ಲ. ಬಿಹಾರ ಸರಕಾರದವರು ಕುಷ್ಠ ರೋಗಿಗಳಿಗಾಗಿ ಬೇರೊಂದು ಸೆರೆ ಮನೆಯನ್ನು ಕಟ್ಟುವದಾದರೆ ಅದೊಂದು ದೊಡ್ಡ ವಿಷಾದಕರ ಸಂಗತಿಯೆಂದು ನಿಮಗೆ ಬರೆಯಬೇಕೆಂದು ತೋರಿತು. ಈ ಅಕಾರಣ ಕ್ರಮದ ಏಕಮಾತ್ರ ಪರಿಣಾಮವಾಗಿ ಕುಷ್ಠರೋಗದ ಮೇಲೆ ಜನರಿಗಿರುವ ತಿರಸ್ಕಾರಬುದ್ಧಿ ಇನ್ನಷ್ಟು ಬಲಗೊಳ್ಳದಿರದು. ಪರೀಕ್ಷಿಸಿದರೆ ಈ ಕುಷ್ಠರೋಗಿ ಕೈದಿಗಳಲ್ಲಿ ನೂರಕ್ಕೆ ಎಂಭತ್ತು ಜನರಾದರೂ ಅಸಾಂಕ್ರಾಮಿಕರಿರುವರೆಂದು ಕಂಡುಬಂದೀತು. ಇಂಥವರನ್ನು ಇತರ ಕೈದಿಗಳಿಂದ ಬೇರೆ ಮಾಡುವದಕ್ಕೆ ಏನೂ ಕಾರಣವಿರದು. ಸಾಂಕ್ರಾಮಿಕ ಕುಷ್ಠದಿಂದ ಬಳಲುತಿರುವ ವಿಷಯದಲ್ಲಿ ಇಷ್ಟು ಮುಂಜಾಗ್ರತೆ ತೆಗೆದುಕೊಂಡರೆ ಸಾಕು: ರಾತ್ರಿಕಾಲದಲ್ಲಿ ಅವರು ನಿರೋಗಿಗಳ ಸಂಪರ್ಕ ಮಾಡಕೂಡದು ಮತ್ತು ಹಗಲಲ್ಲಿ ನೇರವಾದ ಸಮೀಪ ಸಂಪರ್ಕ ಇಡದಂತೆ ನೋಡಿಕೊಳ್ಳಬೇಕು. ಸಾಂಕ್ರಾಮಿಕ ಜಾತಿಯಾದರೆ ಕೂಡ ಕುಷ್ಠರೋಗದ ಸೋಂಕು ಬಹಳ ಮಂದವಾದುದು. ಇದರಿಂದ ಈ ರೋಗದಿಂದ ಪೀಡಿತರಾದವರನ್ನು ಇತರ ಸುಂಕುರೋಗಿಗಳಿಗಿಂತ ಹೆಚ್ಚು ಸರಳವಾಗಿ ನೋಡಿಕೊಳ್ಳಬಹುದು. ಹೀಗಿದ್ದರೂ ವರದಿ ಸತ್ಯವಾಗಿದ್ದರೆ ಸೋಂಕಿನ ಭಯದಿಂದಲೆ ಬಿಹಾರ ಸರಕಾರ ಈ ಕೆಲಸದಲ್ಲಿ ಪ್ರವೃತ್ತವಾಗಿದೆ. ಆ ಶಬ್ದವೇ ಕುಷ್ಠವನ್ನು ಕುರಿತು ಹಳೇ ಭಾವನೆಗಳ ದ್ಯೋತಕವಾಗಿದೆ. ಕುಷ್ಠರೋಗಿಗಳು ಸಂಕ್ರಾಮಿಕರೆಂಬ ಅರ್ಥದ ಹೇಳಿಕೆಗಳು ನಿರಂತರವಾಗಿ ಪ್ರಕಟವಾಗುತಿರುವದು ದುಃಖದ ಸಂಗತಿ.

"ನಾವು ಮದ್ರಾಸಿನಲ್ಲಿ ಕುಷ್ಠರೋಗ ಪೀಡಿತರ ಮೇಲಿರುವ ಸಾಮಾಜಿಕ ತಿರಸ್ಕಾರ ಬುದ್ಧಿಯ ಆಧಾರದಿಂದ ಅವರ ವಿರುದ್ಧ ಪಕ್ಷಪಾತ ಮಾಡುವದನ್ನು ಪ್ರತಿಭಟಿಸುತಿದ್ದೇವೆ ಮತ್ತು ಶ್ರೀ ಜಗದೀಶನ್ನರ ಬೆಂಬಲದಿಂದ ಅವರಿಗಾಗಿ ಸಾಧ್ಯವಿದ್ದುದನ್ನೆಲ್ಲಮಾಡುತಿದ್ದೇವೆ. ಕುಷ್ಠರೋಗ ಅಂಟಿಸಿಕೊಳ್ಳುವದು ಗೊಬ್ಬರ ಅಂಟಿಸಿಕೊಳ್ಳುವದಕ್ಕಿಂತ ಕಲಂಕಪ್ರಾಯವಾದುದಲ್ಲ. ಅದು ವೇಗವಾಗಿ ಹಬ್ಬುವ ಪಿಡುಗೆಂದು ಜನರಲ್ಲಿ ರೂಢವಾಗಿರುವ ನಂಬಿಕೆ ಸರಿಯಲ್ಲವೆಂದು ಅವರಿಗೆ ಮನವರಿಕೆಯಾಗುವ ವರೆಗೆ ಕುಷ್ಠರೋಗವನ್ನು ಒಡಿತದಲ್ಲಿ ತಡುವ ಪ್ರಯತ್ನ ಬಹಳ ಮುಂದುವರಿಯಲಾರದು. ದೇಶದ ವಿಧಾಯಕ ಕಾರ್ಯಕ್ರಮದಲ್ಲಿ ಕುಷ್ಠರೋಗಿ ಸೇವೆಯೂ ಒಂದಂಗವೆಂದು ನೀವು ಗೊತ್ತುಪಡಿಸಿರುವ ಸಮಾಚಾರವನ್ನು ಜಗದೀಶನ್ನರಿಂದ ತಿಳಿದು ನಾನು ಬಹಳ ಕೃತಜ್ಞನಾಗಿದ್ದೇನೆ. ಕುಷ್ಠರೋಗಿಯೂ ನಮ್ಮಲ್ಲಿ ದೊಡ್ಡವರಿಗಿಂತ ದೊಡ್ಡವರೆನಿಸಿದವರಂತೆ ಸಮಾಜದ ಅಂಗವೆಂದು ನೀವು ಹೇಳಿದ್ದು ನನ್ನ ಮನ ಕರಗಿಸಿದೆ. ನಿಮ್ಮ ಮಾರ್ಗವನ್ನೆ ಅನುಸರಿಸಿ ರಾಷ್ಟ್ರದ ನಾಯಕರೆಲ್ಲ ಕುಷ್ಠರೋಗಿಗೆ ನ್ಯಾಯದೊರೆಯುವಂತೆ ಮಾಡುವರೆಂದು ಹಾರೈಸಲೆ?"

ಬಿಹಾರವನ್ನು ಕುರಿತ ಈ ಸುದ್ದಿ ಸುಳ್ಳೆಂದೂ ಒಂದು ವೇಳೆ ಸತ್ಯವಾಗಿದ್ದರೂ ಈ ಪತ್ರದಿಂದ ಕುಷ್ಠರೋಗದ ಭಯ ನಿವಾರಣೆ ಹೊಂದುವದೆಂದೂ ಆಶಿಸೋಣ. ಅಂಥ ವಿಶ್ವಾಸಗಳು ಬೇಗನೆ ತೊಲಗುವದಿಲ್ಲ. ಶ್ರದ್ಧೆ, ಅಂಥ ವಿಶ್ವಾಸಗಳ ಬೀಡಾದ ಈ ದೇಶದಲ್ಲಿ ಎರಡೂ ಹೇರಳವಾಗಿವೆ. ಆದರಿಂದ, ಅವು ಎಷ್ಟೋ ವೇಳೆ ಒಂದರಲ್ಲೊಂದು ಬೆರೆತುಹೋಗುವವು. ಅಸಂಖ್ಯ ಅಂಧವಿಶ್ವಾಸಗಳು ಶ್ರದ್ಧೆಗೆ ಸೋಂಕಿ ಅದಕ್ಕೆ ಗ್ರಹಣ ಹತ್ತಿಸಿರುವದರಿಂದ ಅವೆರಡರಲ್ಲಿ ಒಂದನ್ನು ಇನ್ನೊಂದರಿಂದ ಬೇರ್ಪಡಿಸಿ ಗುರುತಿಸುವದೂ ಕಠಿನವಾಗಿದೆ. ಆದರೆ ಅಂಥ ವಿಶ್ವಾಸಗಳ ದಂಡೇಬಂದರೂ ಅವು ಮುಟ್ಟಲಾರದಷ್ಟು ಉಜ್ವಲವಾಗಿ ಉರಿಯುತಿರುವ ನನ್ನ ಶ್ರದ್ಧೆ ಹೇಳುತ್ತದೆ,—ಕುಷ್ಠರೋಗ ಸಾಂಕ್ರಾಮಿಕವಲ್ಲವೆಂದು. ಸುಂಕು ಜಾಡ್ಯಗಳ ವಿಷಯದ ನಿಯಮಗಳನ್ನು ಅರಿತುಕೊಂಡು ಅವುಗಳನ್ನು ನಾವು ಪಾಲಿಸಬೇಕು.

ಡಾ. ಕಾಕ್ರೇನರು ವೈದ್ಯಕೀಯ ಪರೋಪಕಾರಿಯೆಂದು ನನ್ನ ನಂಬಿಕೆ. ಕುಷ್ಠ ಮತ್ತು ಕುಷ್ಠರೋಗ ಇವುಗಳ ಬಗೆಗೆ ಅವರು ಬಹುಶ್ರುತರು. ರಾಷ್ಟ್ರೀಯ ಸರಕಾರಗಳು ಆ ಜಾತಿಯ ರೋಗಗಳೆಲ್ಲೆಲ್ಲ ಕುಷ್ಠರೋಗ ಅತಿ ದುರ್ಬಲವಾದುದೆಂಬ ಅವರ ಅಭಿಪ್ರಾಯನ್ನಂಗೀಕರಿಸಿದರೆ ತಪ್ಪಾಗಲಾರದೆಂದು ನನ್ನ ಕಲ್ಪನೆ. ಅದು ಉಗ್ರವಾಗಿದ್ದರೆ ರೋಗಿಗೆ ಅಂಗವಿಕಾರವನ್ನುಂಟು ಮಾಡಿ ಸಾಮಾನ್ಯ ವೈದ್ಯಕೀಯ ಶುಶ್ರೂಷೆಗೆ ಜಗ್ಗುವದಿಲ್ಲ. ಪ್ರಕೃತಿಯೇನು ಮಾಡುವದೋ ಅದಾರಿಗೂ ತಿಳಿಯದು. ಆದರೆ ಸಾಮಾನ್ಯ ಜನರು ಈ ಕಠಿನ ವಿಷಯದ ಬಗ್ಗೆ ತಲೆಕೆಡಿಸಿಕೊಳ್ಳುವ ಅವಶ್ಯಕತೆಯಿಲ್ಲ. ಕುಷ್ಠರೋಗಿಯೂ ಇತರರಂತೆ ತಮ್ಮ ಬಂಧುವೆಂದೂ ಅವನನ್ನು ಕಂಡು ಹೇಸುವದು ಸರಿಯಲ್ಲವೆಂದೂ ಅವರು ಮನಗಂಡರೆ ಸಾಕು.

ಹೊಸದಿಲ್ಲಿ, —ಮೋ. ಕ. ಗಾಂಧಿ.
೧೧—೦—೧೯೪೬;

## ಸುಭಾಸ ಬೋಸರು ಇಪಿ ಫಕೀರರಲ್ಲಿರುವರು

ಸುಭಾಷಚಂದ್ರ ಬೋಸರು ಇಪಿ ಫಕೀರರ ಅತಿಥಿಗಳಾಗಿರುವರೆಂದೂ ಇತ್ತೀಚೆಗೆ ವಿಮಾನ ದಲದವರು ಆ ಭಾಗದಲ್ಲಿ ಬಾಂಬುಗಳ ಮಳೆಗರೆದರೂ ಅವರು ಆರೋಗ್ಯದಿಂದಿರುವರೆಂದೂ ಸಿಂಧ ಪುರೋಗಾಮಿ ಪಕ್ಷದ "ಟುಮಾರೊ" ಎಂಬ ಪತ್ರಿಕೆಯಲ್ಲಿ ಪ್ರಕಟವಾಗಿದೆ.

ನೇತಾಜಿಯವರ ಹಸ್ತಾಕ್ಷರದ ೯ನೇ ಸಪ್ಟೆಂಬರ ತಾರೀಖಿನ ಪತ್ರವೇ ಇದಕ್ಕೆ ಆಧಾರಭೂತವಾಗಿದೆ. ಅವರು ಈ ಎಪ್ರಿಲ ವರೆಗೆ ಆಗ್ನೇಯ ಏಸಿಯಾದಲ್ಲಿ ಇದ್ದರು. ಮುಂದೆ ಕೆಲವು ವಿದೇಶಿ ಸರಕಾರಗಳ ಸಹಾಯದಿಂದ ಅವರು ಯುರೋಪಕ್ಕೆ ಹೋಗಿ ಅಲ್ಲಿಂದ ಈಗ ಗಡಿನಾಡಿಗೆ ಬಂದು ಇಪಿ ಫಕೀರರಲ್ಲಿ ಉಳಿದಿರುವರು ಎಂದು ಉಲ್ಲೇಖಿಸಿದೆ.

ಕಾಸರಗೋಡು ಸರ್ಕಲ್ ಕಾಂಗ್ರೆಸ್ ಸಮಿತಿಯ ಸಭೆಯೊಂದು ತಾ. ೧೮ ರಲ್ಲಿ ಜರಗಿ ಜಿಲ್ಲಾ ಬೋರ್ಡ ಚುನಾವಣೆಗಳಲ್ಲಿ ಜಿಲ್ಲಾ ಕಾಂಗ್ರೆಸು ಭಾಗವಹಿಸಬೇಕೆಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸುವಗೊತ್ತುವಳಿಯನ್ನು ಪಾಸುಮಾಡಿತು. ತಾಲೂಕಿನ ಜಾತಿವಾರು ಭಾಷಾವಾರು ಜನಸಂಖ್ಯೆಯ ಯಾದಿಯನ್ನು ಪಡೆದು ತಾಲ್ಲೂಕಿನ (ಮಲೆಯಾಳಿ, ಕನ್ನಡ) ವಿಭಜನೆಯ ಪ್ರಶ್ನೆಯನ್ನು ಪರ್ಯಾಲೋಚಿಸಬೇಕೆಂದು ಇನ್ನೊಂದು ನಿರ್ಣಯವಾಗಿದೆ.

## ಪ್ರಕಾಶಮರ ಮೂರು ದೊಡ್ಡ ಯೋಜನೆಗಳು

### ಮಹಾತ್ಮರ ಪ್ರಾರ್ಥನೋತ್ತರ ಭಾಷಣ

ಮಹಾತ್ಮಾ ಗಾಂಧಿಯವರು ತಾ. ೨೫ ಸಂಜೆಯಲ್ಲಿ ಪ್ರಾರ್ಥನೆಯ ನಂತರ ಎರಡು ವಿಷಯಗಳ ಬಗ್ಗೆ ಮಾತಾಡಿದರು. ಮದ್ರಾಸದ ಮುಖ್ಯ ಪ್ರಧಾನರಾದ ಶ್ರೀ ಟಿ. ಪ್ರಕಾಶಮರು ಕೈಕೊಂಡ ಮೂರು ದೊಡ್ಡ ಯೋಜನೆಗಳ ಕಡೆಗೆ ಅವರು ಮೊದಲು ಹೊರಳಿ ಹೀಗೆ ಹೇಳಿದರು. ಪ್ರಾಂತವನ್ನು ಬಟ್ಟೆ ವಿಷಯದಲ್ಲಿ ಸ್ವಾವಲಂಬಿಮಾಡಲು ಅವರು ಖಾದಿ ಯೋಜನೆ ಪ್ರಾರಂಭಿಸಲಿರುವರು. ಗ್ರಾಮೋದ್ಯೋಗಗಳಿಗೂ ಉತ್ತೇಜನ ಕೊಡಲಾಗುವದು ಮತ್ತು ಹಳ್ಳಿಗಳಲ್ಲಿ ನಯಿ ತಾಲೀಮು ಪ್ರಾರಂಭಿಸಲಾಗುವದು. ಇದಲ್ಲದೆ ಅವರು ಅಸ್ಪೃಶ್ಯತೆಯನ್ನು ನಿರ್ಮೂಲನ ಮಾಡಲು ಹಾಗು ಪಾನಪ್ರತಿಬಂಧಮಾಡಲು ನಿರ್ಧರಿಸಿದ್ದಾರೆ. ಈ ಎಲ್ಲ ಯೋಜನೆಗಳು ಅನೇಕ ವರ್ಷಗಳಿಂದ ಕಾಂಗ್ರೆಸ್ಸಿನ ಕಾರ್ಯಕ್ರಮದ ಅಂಗಗಳಾಗಿದ್ದು ಅವುಗಳನ್ನು ಜಾರಿಯಲ್ಲಿ ತರಲು ವಿಶ್ವಾಸ ಹಾಗು ನಿರ್ಧಾರ ಬೇಕು. ಕಾಂಗ್ರೆಸ್ ಧುರೀಣರು ಶುದ್ಧಾಂತಃಕರಣದಿಂದ ತಮ್ಮ ವಚನದಂತೆ ನಡೆದುಕೊಳ್ಳಬೇಕು. ಆಮಿಷಗಳಿಗೆ ಒಳಗಾಗಬಾರದು. ತತ್ವಕ್ಕಾಗಿ ಮುಗುಳುನಗೆಯಿಂದ ಗಲ್ಲಿಗೆ ಹೋಗಲು ಸಿದ್ಧರಾಗಬೇಕು.

ಜವಳಿಗಿರಣಿಗಳು ಹಳ್ಳಿಗಳಿಗೆ ಗಿಷಯವಾಗಿರುವವು- ಆದ್ದರಿಂದ ಅವುಗಳ ಗೊಡವೆಗೆ ಹೋಗಬಾರದು. ನಾನು ಗಿರಣಿ ಒಡೆಯನ ಅತಿಥಿಯಾಗಿದ್ದುದು ಆಶ್ಚರ್ಯವಾಗಿ ಕಾಣಬಹುದು ಆದರೆ ಈ ಗಿರಣಿ ಒಡೆಯರು ನನ್ನ ಅಭಿಪ್ರಾಯ ಅವರಿಗೆ ಪ್ರತಿಕೂಲವಾಗಿದ್ದರೂ ನನ್ನನ್ನು ತಮ್ಮ ಕುಟುಂಬದವನೆಂದೇ ಭಾವಿಸಿದ್ದಾರೆ. ಅಹಿಂಸೆಯು ಎಲ್ಲರೊಡನೆಯೂ ಪ್ರೀತಿ ಹಾಗು ತಾಳ್ಮೆಯಿಂದಿರಲು ಹೇಳುವದು. ಪ್ರಕಾಶಮರು ನನಗೆ ಹೊಸ ಜವಳಿ ಗಿರಣಿಗಳಿಂದ ತಾವು ಲುಬ್ಧರಾಗುವದಿಲ್ಲೆಂದೂ ಸಾಕಷ್ಟು ಖಾದಿ ಲಭ್ಯವಾದ ಕೂಡಲೆ ಈಗಿದ್ದವುಗಳನ್ನು ಸಹ ನಿರ್ಮೂಲ ಮಾಡಲಾಗುವದೆಂದೂ ವಚನ ಕೊಟ್ಟಿದ್ದಾರೆ. ಯಾಕಂದರೆ ಗಿರಣಿ ಹಾಗು ಖಾದಿ ಕೂಡಿ ಹೋಗುವದು ಶಕ್ಯವಿಲ್ಲ.

ಅನಂತರ ಅವರು ಅಹಾರ ಸಂಬಂಧದಲ್ಲಿ ಈ ರೀತಿ ಹೇಳಿದರು. ರಾಜೇಂದ್ರ ಪ್ರಸಾದರು ರಾಜಹೃದಯವುಳ್ಳವರಾಗಿರುವರು. ಬಡವರು ಉಪವಾಸ ಬೀಳುತ್ತಿದ್ದರೆ ತಮ್ಮ ರೊಟ್ಟಿಯ ತುಣಕನ್ನು ಅದರೊಂದಿಗೆ ಸೇವಿಸುವರು ದಕ್ಷಿಣದಿಂದ ಆರ್ತಸ್ವರ ಬಂದಕೂಡಲೆ ಅವರು ಸಾಧ್ಯವಿದ್ದ ಕಡೆಯ ಅಕ್ಕಿ ಕೂಡಿಸಿ ಪೂರೈಕೆಯ ಆಶ್ವಾಸನವಿತ್ತರು. ದಕ್ಷಿಣ ಹಿಂದುಸ್ತಾನವು ಉಪವಾಸಬೀಳುವದು ಶಕ್ಯವಿಲ್ಲ. ದಕ್ಷಿಣ ಭಾರತೀಯರ ಪರಿಚಯವು ನನಗೆ ಚನ್ನಾಗಿದೆ. ದಕ್ಷಿಣ ಆಫ್ರಿಕೆಯಲ್ಲಿ ನನಗೆ ಅವರ ಮೊದಲ ಪರಿಚಯವಾಯಿತು ಮತ್ತು ಅಲ್ಲಿಯ ಸತ್ಯಾಗ್ರಹ ಚಳವಳಿಯಲ್ಲಿ ನಾನು ಅವರು ಎಷ್ಟು ಜಾಣ ಹಾಗು ಸ್ವಾವಲಂಬಿಗಳಾಗಿರುವರೆಂಬುದನ್ನು ಅರಿತುಕೊಂಡೆನು. ಅವರಿಗೆ ೧ ಪೌಂಡು ಬ್ರೆಡು ಹಾಗು ೧ ಔಂಸ ಸಕ್ಕರೆ ಸಿಗುತ್ತಿತ್ತು. ಸತ್ಯಾಗ್ರಹ ಯಾತ್ರೆಯಲ್ಲಿ ಅವರು ತೊಪ್ಪಲ ಬೇಯಿಸಿಕೊಂಡು ತಿನ್ನುತಿದ್ದರು. ದಕ್ಷಿಣ ಭಾರತವು ಬಾಳೆಹಣ್ಣು, ಟೆಂಗಿನಕಾಯಿ, ಗಡ್ಡೆಗೆಣಸು, ಹುಣಸೆಹಣ್ಣು, ಕಾಯಿಪಲ್ಲೆ, ಮೆಣಸಿನಕಾಯಿ ಇವುಗಳ ದೇಶವಾಗಿದೆ. ಇದಕ್ಕೂ ಹೆಚ್ಚಿಗೇನು ಬೇಕು? ಅಕ್ಕಿಯಿಲ್ಲದಿದ್ದರೂ ಅವರು ಇವುಗಳ ಯೋಗ್ಯ ಉಪಯೋಗ ಮಾಡಿಕೊಂಡುಹೋಗಬೇಕು. ಡಾ. ರಾಜೇಂದ್ರರಿಗೆ ತೊಂದರೆ ಕೊಡಬಾರದೆಂದು ಪ್ರಕಾಶಮರಿಗೆ ನಾನು ಹೇಳಿದ್ದು ಅವರು ಅದಕ್ಕೆ ಒಪ್ಪಿಕೊಂಡಿದ್ದಾರೆ. ಮದ್ರಾಸನನ್ನು ಅವರು ತಮ್ಮ ದೇವದತ್ತ ಶಕ್ತಿಯಿಂದ ಸ್ವಾವಲಂಬಿ ಮಾಡುವದನ್ನು ನಾವು ಇನ್ನು ನೋಡಬೇಕು. ಪ್ರತಿಯೊಬ್ಬರು ಈಗ ಸ್ವಾವಲಂಬಿಯಾಗುವದೇ ಭೂಷಣವಾಗಿರುವದು.

## ಹಿಂದುಸ್ತಾನ ಕಚೇರಿಯನ್ನು ಮುಚ್ಚಲಾಗುವದು

ನಡುಗಾಲ ಸರಕಾರದಲ್ಲಿ ವಿದೇಶ ಹಾಗು ಕಾಮನವೆಲ್ತ ಹಿತಸಂಬಂಧ ಖಾತೆಗಳ ಮಂತ್ರಿಗಳಾಗಿರುವ ಪಂಡಿತ ಜವಾಹರಲಾಲ ನೆಹರೂರವರು ನಡುಗಾಲ ಸರಕಾರದ ಭಾವಿ ಧೋರಣೆಯನ್ನು ಸುದ್ದಿಗಾರರ ಸಭೆಯಲ್ಲಿ ವಿವರಿಸಿದರು.

ಅವರ ಹೇಳಿಕೆಯ ಮುಖ್ಯಾಂಶಗಳು ಇಂತಿವೆ:

ಪರರಾಷ್ಟ್ರಗಳಲ್ಲಿರುವ ಹಿಂದೀ ಸರಕಾರದ ಪ್ರತಿನಿಧಿಗಳ ಸಂಖ್ಯೆಯನ್ನು ಹೆಚ್ಚಿಸಲಾಗುವದು. ಅವರಿಗೆ ಬ್ರಿಟಿಶ ವಿದೇಶ ಖಾತೆಯ ಸಂಬಂಧವಿರುವದಿಲ್ಲ. ಅವರಿಗೆ ಹಿಂದುಸ್ತಾನ ಸರಕಾರವೇ ಸಲಹೆ ಆದೇಶಗಳನ್ನು ಕಳಿಸುವದು. ಅವರ ಸ್ಥಾನಮಾನವಾದರೂ ಏರುವದು. ಮುಂದೆ ಅವರೇ ರಾಯಭಾರಿಗಳಾಗುವರು.

ಹಿಂದೀ ರಾಯಭಾರ ದಲವನ್ನು ಸ್ಥಾಪಿಸುವ ಬಗ್ಗೆ ಒಂದು ಯೋಜನೆಯನ್ನು ತಯಾರಿಸಿ ನಡುಗಾಲ ಮಂತ್ರಿಮಂಡಳದ ಮುಂದಿಡಲಾಗುವದು.

ಏಶಿಯಾ, ಆಫ್ರಿಕಾ ಮುತ್ತಿತರ ಕಡೆಗಳಲ್ಲಿರುವ ವಸಾಹತುವಾದವನ್ನು ಕೊನೆಗಾಣಿಸುವದೇ ನಮ್ಮ ಸರಕಾರದ ಮುಖ್ಯ ಧ್ಯೇಯ.

ಲಂಡನದಲ್ಲಿರುವ ಹಿಂದುಸ್ತಾನ ಕಚೇರಿಯನ್ನು ಬೇಗನೆ ಮುಚ್ಚಲಾಗುವದು.

ಬ್ರಹ್ಮದೇಶದಲ್ಲಿ ಮೇಜರ ಜನರಲ ಅಂಗಸಾನರ ನೇತೃತ್ವದಲ್ಲಿ ತಲೆಯೆತ್ತಿರುವ ಹೊಸ ಸರಕಾರವನ್ನು ನಾವು ಸ್ವಾಗತಿಸುತ್ತೇವೆ.

ಮಧ್ಯಪೂರ್ವಕ್ಕೆ ಒಂದು ಸೌಹಾರ್ದ ಶಿಷ್ಟ ಮಂಡಳವನ್ನು ಕಳಿಸಲಾಗುವದು. ಈ ಶಿಷ್ಟ ಮಂಡಳಕ್ಕೆ ಮೌಲಾನಾ ಅಬುಲಕಲಾಂ ಅಜಾದರು ಧುರೀಣರಾಗಲು ಒಪ್ಪುವರೆಂದು ನಡುಗಾಲ ಸರಕಾರವು ಹಾರೈಸುತ್ತದೆ. ಪಾಶ್ಚಾತ್ಯ ಹಾಗು ಪೌರ್ವಾತ್ಯ ಯುರೋಪಗಳಿಗೆ ಕಳಿಸಲಾಗುವ ಶಿಷ್ಟಮಂಡಳಗಳಲ್ಲಿ ಶ್ರೀ ವಿ. ಕೆ. ಕೃಷ್ಣ ಮೆನನರು ಸದಸ್ಯರಾಗಿ ಹೋಗುವ ಸಂಭವವಿದೆ.

ಮುಂದಿನ ತಿಂಗಳ ಪ್ರಾರಂಭದಲ್ಲಿ ಪಂಡಿತ ಜವಾಹರಲಾಲರು ಗಡಿನಾಡಿನಲ್ಲಿರುವ ಗುಡ್ಡಗಾಡು ಪ್ರದೇಶಗಳಿಗೆ ಭೆಟ್ಟಿಕೊಡುವರು. ಅವರು ತಮ್ಮ ಸಂಗಡ ಖಾನ ಅಬ್ದುಲ ಗಫರಖಾನರನ್ನು ಕರೆದೊಯ್ಯುವರು. ಇಲ್ಲಿಯ ಜನರ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವ ಉದ್ದೇಶ ತಮಗಿಲ್ಲೆಂದು ಪಂ. ನೆಹರೂರವರು ಸ್ಪಷ್ಟಪಡಿಸಿದರು.

ವ್ಯವಹಾರದಲ್ಲಿ ನಡುಗಾಲ ಸರಕಾರವು ಇಂಡೋನೇಶಿಯಾ ಪ್ರಜಾರಾಜ್ಯಕ್ಕೆ ಮನ್ನಣೆ ಕೊಡುತ್ತದೆ. ಇಂಡೋನೇಶಿಯನರ ಬಗ್ಗೆ ನಮಗೆ ನೂರಕ್ಕೆ ನೂರರಷ್ಟು ಸಹಾನುಭೂತಿಯಿದೆ. ಅವರು ಜಯಶಾಲಿಗಳಾಗಿ ಸ್ವಾತಂತ್ರ್ಯವನ್ನು ಸ್ಥಾಪಿಸಲಿ. ಅವರಿಗೆ ಸಹಾಯ ನೀಡಲು ನಾವು ಸದಾ ಸಿದ್ಧರಿರುವೆವು ಎಂದು ಪಂ. ನೆಹರೂರವರು ತಿಳಿಸಿದರು.

ಬಲೂಚಿಸ್ತಾನದಲ್ಲಿ ಪ್ರಾತಿನಿಧಿಕ ಸಂಘ ಸಂಸ್ಥೆಗಳ ಸದಸ್ಯರನ್ನೊಳಗೊಂಡ ಸಲಹೆ ಮಂಡಳವನ್ನು ಸ್ಥಾಪಿಸುವ ಪ್ರಶ್ನೆಯನ್ನು ನಡುಗಾಲ ಸರಕಾರವು ವಿಚಾರಿಸುತ್ತಿದೆ. ಈ ವ್ಯವಸ್ಥೆಯು ಪ್ರಾರಂಭದಲ್ಲಿ ಮಾತ್ರ. ಮುಂದೆ ಪ್ರಜಾಸತ್ತಾತ್ಮಕ ಆಡಳಿತೆಯನ್ನು ಬಳಕೆಯಲ್ಲಿ ತರಲಾಗುವದು.

ಪಂ. ನೆಹರೂರವರು ಸಿಂಹಳ ದ್ವೀಪಕ್ಕೂ ಇಷ್ಟರಲ್ಲಿಯೆ ಭೆಟ್ಟಿಕೊಡಲಿರುವರು.





# ಹಿಂದುಸ್ತಾನ

## ಮುಂಬಯಿ

ಮುಂಬಯಿ ಶಾಸನಸಭೆಯಲ್ಲಿಯ ವಿರುದ್ಧ ಪಕ್ಷದ ಹಿಂದಿನ ಧುರೀಣರಾದ ಸರ್ ಅಲ್ಲೀಮಹಮ್ಮದಖಾನ ದೆಹಲಿಯವರು ಪತ್ರಿಕಾ ಪ್ರಕಟನೆ ಕೊಟ್ಟು ತಾವು ಲೀಗಿಗೆ ರಾಜೀನಾಮೆ ಕೊಟ್ಟಿಲ್ಲೆಂದೂ ತಮಗೆ ಕಳೆದ ಸಲ ಶಾಸನಸಭೆಯ ಚುನಾವಣೆಗೆ ನಿಲ್ಲಲು ಅವಕಾಶ ಕೊಡಲಿಲ್ಲೆಂದೂ ಬರೆದಿದ್ದಾರೆ. ಬಿರುದುಗಳನ್ನು ಬಿಟ್ಟುಕೊಡುವದರಲ್ಲಿ ಯಾವ ಪುರುಷಾರ್ಥವೂ ಇಲ್ಲ. ಈ ಆತ್ಮಕ್ಲೇಶವನ್ನು ಬ್ರಿಟಿಶ್ ಮತ್ತು ಕಾಂಗ್ರೆಸ್ಸು ಲಕ್ಷಿಸಲಾರವು. ಬ್ರಿಟಿಶ್ ಸರಕುಗಳನ್ನು ಬಹಿಷ್ಕರಿಸಲು ಮತ್ತು ಹಿಂದುಗಳೊಡನೆ ವ್ಯಾಪಾರೀ ಸಂಬಂಧ ಇಟ್ಟುಕೊಳ್ಳದಿರಲು ಲೀಗು ಆಜ್ಞಾಪಿಸಿದ್ದರೆ ಒಳಿತಾಗುತಿತ್ತೆಂದೂ ಅವರು ಅಭಿಪ್ರಾಯಪಟ್ಟಿದ್ದಾರೆ.

ಮುಂಬಯಿಯಲ್ಲಿ ೨೩ ನೇ ತಾರೀಕು ಮುಂಜಾನೆ ೬ ರಿಂದ ಸಂಜೆ ೬ ರ ವರೆಗೆ ಇರಿತದಿಂದ ಇಬ್ಬರು ಸತ್ತಿದ್ದು ಮೂವರಿಗೆ ಗಾಯಗಳಾಗಿವೆ. ಈ ಇರಿತಗಳು ಉತ್ತರ ಮಧ್ಯ ಮತ್ತು ಆಗ್ನೇಯ ಭಾಗಗಳಲ್ಲಿ ಸಂಭವಿಸಿರುವವು.

ಅಹಮದಾಬಾದಿನಲ್ಲಿ ೫೦೦ ಸ್ವಯಂ ಸೇವಕರನ್ನು ಬೇರೆ ಬೇರೆ ಸ್ಥಳಗಳಲ್ಲಿ ರಕ್ಷಣೆಗಾಗಿ ಇಡಲಾಗಿದೆ. ಈ ಮಾತನ್ನು ಮುಖ್ಯ ಮಂತ್ರಿ ಖೇರರಿಗೆ ಹೇಳಲು ಅವರು ಮುಂಬಯಿಯೂ ಇದನ್ನು ಅನುಸರಿಸಲಿ ಎಂದು ಹೇಳಿದರು.

ಅಹಮದಾಬಾದಿನಲ್ಲಿ ೨೪ ನೇ ತಾರೀಕು ಮುಂಜಾನೆ ೬ ರಿಂದ ಸಂಜೆ ೪ ರ ವರೆಗೆ ಬೇರೆ ಬೇರೆ ಭಾಗಗಳಲ್ಲಿ ೯ ಇರಿತಗಳು ಸಂಭವಿಸಿವೆ. ಅವರಲ್ಲಿ ಒಬ್ಬನು ಸತ್ತಿರುವನು. ಪೋಲೀಸರು ಈ ಬಗ್ಗೆ ೨೨ ಜನರನ್ನು ಸೆರೆಹಿಡಿದಿದ್ದಾರೆ. ಪೋಲೀಸ ಕಮೀಶನರರು ಕರ್ಫ್ಯೂ ಹುಕುಮನ್ನು ಮತ್ತೆ ಒಂದು ವಾರ ಬೆಳೆಸಿರುವರು.

ಅಹಮ್ಮದಾಬಾದಿನಲ್ಲಿ ರೇಡಿಯೋ ಅಂಗಡಿಯಲ್ಲಿ ೨೪ ನೇ ತಾರೀಕು ಒಂದು ಪಿಸ್ತೂಲಿನಿಂದ ಗುಂಡುಹಾರಿ ಒಬ್ಬನಿಗೆ ಗಾಯವಾಯಿತು. ೨೩ ಕ್ಕೆ ಒಬ್ಬನು ಇರಿಯಲ್ಪಟ್ಟನು. ಪೋಲೀಸರು ೭ ಜನರನ್ನು ಹಿಡಿದರು.

ಅಹಮ್ಮದನಗರ ಜಿಲ್ಹೆಯಲ್ಲಿ ಸಂಗಮನೇರದಲ್ಲಿ ೨೩ ಕ್ಕೆ ಜಾತೀಯ ಗಲಭೆ ಸಂಭವಿಸಿ ಒಬ್ಬನು ಇರಿಯಲ್ಪಟ್ಟು ೮ ಜನರಿಗೆ ಗಾಯಗಳಾದವು. ಎರಡು ಮನೆಗಳಿಗೆ ಬೆಂಕಿ ಹಚ್ಚಲಾಯಿತು. ಎರಡೂ ಪಂಗಡಗಳ ಧುರೀಣರೂ ಶಾಂತತೆಯನ್ನು ರಕ್ಷಿಸುವಲ್ಲಿ ನಿರತರಾಗಿರುವರು.

ಇಷ್ಟು ದಿನಗಳ ವರೆಗೆ ದೇಶದ ಆಡಳಿತೆ ಜನತೆಯ ಕೈಯಲ್ಲಿಲ್ಲದ್ದರಿಂದ ಕಾಯದೆ ಹಾಗು ಸುವ್ಯವಸ್ಥೆಯ ಮಹತ್ವ ಕಡೆಗಣಿಸಲಾಗುತಿತ್ತು. ಹಾಗು ಪೋಲೀಸರೆಂದರೆ ವಿಶಿಷ್ಟ ಸ್ವರೂಪದ ಸರಕಾರವನ್ನು ಕಾಯ್ದುಕೊಳ್ಳುವ ಸಾಧನವೆಂದು ಗಣಿಸಲಾಗುತಿತ್ತು. ಇದು ಶುದ್ಧ ತಪ್ಪು ಆಗಿತ್ತು. ಜನತಾ ಸರಕಾರ ಅಭಿವೃದ್ಧಿ ಹೊಂದಿದಂತೆ ಜನರು ಈ ತರದ ಕಲ್ಪನೆಯನ್ನು ಬಿಟ್ಟುಗೊಟ್ಟು ಪೋಲೀಸರನ್ನು ಶಾಂತತಾ ರಕ್ಷಕರೆಂದು ಭಾವಿಸುವರಾಗಿ ಆಶಿಸುತ್ತೇನೆಂದು ಮುಂಬಯಿ ಗವರ್ನರರು ಪೋಲೀಸ ದರಬಾರದ ಕಾಲಕ್ಕೆ ಪುಣೆಯಲ್ಲಿ ಹೇಳಿದರು. ಪೋಲೀಸನು ಪ್ರತಿಯೊಬ್ಬ ನಾಗರಿಕನ ಕೃತಜ್ಞತೆಗೆ ಪಾತ್ರನಾಗುವಂತೆ ಕೆಲಸ ಮಾಡಬೇಕೆಂದು ಅವರು ಹೇಳಿದರು.

ಮುಂಬಯಿಯಲ್ಲಿಯ ದಂಗೆಯ ಸನ್ನಿವೇಶಗಳ ಫೋಟೋ ಸುದ್ದಿ ಟೀಕೆ ಮತ್ತು ವರದಿಗಳನ್ನು ಚೀಫ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರ ಮುಂಗಡ ಅಪ್ಪಣೆ ಇಲ್ಲದೆ ಪ್ರಸಿದ್ಧಿಸಬಾರದೆಂದು ವಿಧಿಸಿದ ಆಜ್ಞೆಯನ್ನು ಮಾತೃಭೂಮಿ ಮತ್ತು ಭಾರತ ಸಮಾಚಾರ ಪತ್ರಿಕೆಗಳ ಸಂಪಾದಕರಾದ ಶ್ರೀ ಸಿ. ವಿ. ಶಹಾರು ಪ್ರತಿಭಟಿಸಿದ್ದಾರೆ.

ಮುಂಬಯಿ ಕಾಲಬಾದೇವಿಯಲ್ಲಿ ಮೋಟಾರಿನಲ್ಲಿ ಕುಳಿತು ಗುಂಡಿನ ಅತ್ಯಾಚಾರವೆಸಗಿ ಓಡಿಹೋಗಿದ್ದ ಸಂಶಯದ ಮೇಲೆ ಮುಂಬಯಿ ಗುಪ್ತ ಪೋಲೀಸರು ನಾಲ್ವರನ್ನು ಬಂಧಿಸಿದ್ದಾರೆ. ಇವರು ಕಲಕತ್ತೆಯಿಂದ ಬಂದವರೆಂದು ತಿಳಿಯುತ್ತದೆ. ಕಲಕತ್ತೆಯಲ್ಲಿ ಶಸ್ತ್ರಾಗಾರವೊಂದನ್ನು ಸುಲಿಗೆ ಮಾಡಿ ೨ ಬ್ರೆನ್‌ಗನ್ ೬ ರಿವಾಲ್ವರ ಮತ್ತು ೩೦೦೦ ಗುಂಡುಗಳನ್ನು ಅಪಹರಿಸಿದ್ದಾರಂತೆ.

## ಮದ್ರಾಸ

ದಿಲ್ಲಿಯಲ್ಲಿ ಸಪ್ಟಂಬರ ೨೩ ಕ್ಕೆ ಕೂಡಲಿದ್ದ ಅಖಿಲ ಭಾರತ ರೇಲ್ವೆ ಕೆಲಸಗಾರರ ಮಹಾಮಂಡಳದ ಸಾಧಾರಣ ಸಭೆಯು ಅಕ್ಟೋಬರ ೨೨ ಕ್ಕೆ ಮುಂದೆ ಹಾಕಲ್ಪಟ್ಟಿತು.

ಒಂದು ತಿಂಗಳ ಹಿಂದೆ ಪ್ರಾರಂಭವಾದ ಸೌಥ ಇಂಡಿಯನ್ ರೇಲ್ವೆ ಕೆಲಸಗಾರರ ಸಂಪು ೨೨ ಕ್ಕೆ ಕೊನೆಗಂಡಿತು.

ತ್ರಿಚನಾಪಳ್ಳಿ ಗೋಲ್ಡನರಾಕದಲ್ಲಿ ೧೫ ನೇ ತಾರೀಕಿಗೆ ಸಂಭವಿಸಿದ ಗಲಭೆಯ ಸಂಬಂಧದಲ್ಲಿ ೨೮೯ ಜನರು ಬಂಧಿಸಲ್ಪಟ್ಟಿದ್ದು ಮ್ಯಾಜಿಸ್ಟ್ರೇಟರು ಅವರನ್ನು ರಿಮಾಂಡಿನಲ್ಲಿಟ್ಟಿರುವರು.

ಮುಂದಿನ ವರ್ಷದಿಂದ ಪತ್ರಿಕಾ ವ್ಯವಸಾಯದ ಪ್ರಮಾಣಪತ್ರದ ಅಭ್ಯಾಸಕ್ರಮವನ್ನು ಪ್ರಾರಂಭಿಸಬೇಕೆಂದು ಮದ್ರಾಸ ವಿಶ್ವವಿದ್ಯಾನಿಲಯ ನಿರ್ಧರಿಸಿದೆ. ಅಭ್ಯಾಸಕ್ರಮ ಒಂದು ವರ್ಷದ್ದು ಇದ್ದು ವಿದ್ಯಾರ್ಥಿಗಳು ಪದವೀಧರರಿರಬೇಕು. ಸಿಂಡಿಕೇಟಿನವರು ಮಾನ್ಯಮಾಡಿದ ವರ್ತಮಾನಪತ್ರ ಕಚೇರಿಯಲ್ಲಿ ಕೆಲಕಾಲ ವಿದ್ಯಾರ್ಥಿಗಳು ತರಬೇತಿ ಹೊಂದಬೇಕಾಗುವದು.

## ಹೊಸದಿಲ್ಲಿ

ಹಿಂದರಾಷ್ಟ್ರೀಯ ಸೈನ್ಯದ ಧುರೀಣರು ಕಾಂಗ್ರೆಸ ಸ್ವಯಂಸೇವಕದಲದ ಸೂಚನೆಯ ವಿವರಗಳಲ್ಲಿ ನಿರತರಾಗಿರುವರು. ಹಿಂದುಸ್ತಾನೀ ಸೇವಾದಲದ ಸಂಸ್ಥಾಪಕರಾದ ಡಾ. ಹರ್ಡೀಕರರು ವಿಶೇಷ ಆಮಂತ್ರಣದ ಮೇರೆಗೆ ಹೊಸದಿಲ್ಲಿಗೆ ಹೋಗಿದ್ದು ಸಂಘಟನೆ ಕೆಲಸದಲ್ಲಿ ತಮ್ಮ ಅನುಭವದ ಲಾಭ ಅವರಿಗೆ ಮಾಡಿಕೊಡುತಿರುವರು.

ಜಮಾಯತ ಉಲ್ ಉಲೇಮಾ ಹಿಂದ, ಮಜಲೀಸ ಅಹರಾರ, ಅ. ಭಾ. ಮೋಮೀನ ಪರಿಷತ್ತು ಅ. ಭಾ. ಮುಸ್ಲಿಂ ಮಜಲೀಸ ಹಾಗು ಬಲೂಚಿಸ್ತಾನದ ಅಂಜುಮಾನ ಈ ವತನ ಈ ರಾಷ್ಟ್ರೀಯ ಮುಸ್ಲಿಂ ಸಂಸ್ಥೆಗಳು ಒಂದಾಗಿ ಕಾರ್ಯನಡೆಸುವ ಸಂಬಂಧದಲ್ಲಿ ಆಯಾ ಸಂಸ್ಥೆಗಳ ಪ್ರತಿನಿಧಿಗಳು ದಿಲ್ಲಿಯಲ್ಲಿ ಸಭೆ ಸೇರಿ ವಿಚಾರವಿನಿಮಯ ಮಾಡಿದರು.

ಕಾಂಗ್ರೆಸ ಕಾರ್ಯಸಮಿತಿಯಲ್ಲಿ ಶ್ರೀ ಜಯಪ್ರಕಾಶ ನಾರಾಯಣರು ಸೇರಿದ್ದರಿಂದ ಅವರು ಕಾಂಗ್ರೆಸ ಸೊಶಾಲಿಸ್ಟ ಪಕ್ಷದ ಪ್ರಧಾನ ಕಾರ್ಯದರ್ಶಿಯ ಸ್ಥಳಕ್ಕೆ ರಾಜೀನಾಮೆ ಕೊಟ್ಟಿದ್ದಾರೆ. ಶ್ರೀ ಆಚಾರ್ಯ ಪಟವರ್ಧನರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟಿರುವರು.

ಹಿಂದುಸ್ತಾನದಲ್ಲಿ ಪ್ರತಿಯೊಂದು ಪ್ರಾಂತದಲ್ಲಿಯೂ ದಿಲ್ಲಿಯಲ್ಲಿರುವಂಥ ಪ್ರಥಮ ವರ್ಗದ ಮಲೇರಿಯ ಸಂಸ್ಥೆಗಳನ್ನು ತೆರೆಯುವ ಅವಶ್ಯಕತೆಯಿದೆಂದು ಕೇಂದ್ರ ಸರಕಾರದ ಆರೋಗ್ಯ ಮಂತ್ರಿಗಳಾದ ಸರ್ ಶಾಫತ್ ಅಹಮ್ಮದ ಖಾನರು ಅಭಿಪ್ರಾಯಪಟ್ಟರು.

ನಡುಗಾಲ ಸರಕಾರದ ಮಂತ್ರಿಗಳು ನಿರ್ವಹಿಸತಕ್ಕ ಕಾರ್ಯಭಾರ ಹೆಚ್ಚಾದುದು ಇರುವದರಿಂದ ಉಪಮಂತ್ರಿಗಳನ್ನು ನೇಮಿಸಿಕೊಳ್ಳುವ ವಿಚಾರ ಈಗ ನಡೆದಿದೆಂದು ತಿಳಿಯುತ್ತದೆ. ಕೇಂದ್ರ ಶಾಸನ ಸಭೆ ಅಕ್ಟೋಬರ ೨೬ ಕ್ಕೆ ಪ್ರಾರಂಭವಾಗುವ ಪೂರ್ವದಲ್ಲಿ ಈ ಸಂಬಂಧದ ನಿರ್ಣಯ ಹೊರಬೀಳಲಿದೆ. ಕೇಂದ್ರ ಶಾಸನ ಸಭೆಯ ಸದಸ್ಯರಲ್ಲಿ ಇವರನ್ನಾರಿಸಿಕೊಳ್ಳಲಾಗುವದು.

ಡಾಕಾದಲ್ಲಿ ೨೪ ಕ್ಕೆ ಒಬ್ಬನು ಇರಿಯಲ್ಪಟ್ಟನು. ಒಬ್ಬ ತರುಣನು ಕಠಾರಿ ಸಹಿತ ಹಿಡಿಯಲ್ಪಟ್ಟಿದ್ದಾನೆ. ೯ ಕಡೆಗೆ ಬೆಂಕಿಹಚ್ಚಲಾಗಿದೆ.

## ಸಂಯುಕ್ತ ಪ್ರಾಂತ

ಕಾಶೀವಾಡ ಲಖನೌ ಎಕ್ಸಪ್ರೆಸ್ಸು ದಿಗವಾರ ಹಾಗು ದಾರಾಗೋಪಾಲ ಸ್ಟೇಶನ ನಡುವೆ ೨೩ ನೇ ತಾರೀಕು ಹಳಿ ಬಿಟ್ಟು ಸರಿದು ೨೭ ಪ್ರಯಾಣಿಕರು ಸತ್ತರೆಂದೂ ೭೦ ಜನರು ಗಾಯಗೊಂಡರೆಂದೂ ತಿಳಿಯುತ್ತದೆ.

ಹಿಂದುಸ್ತಾನದಲ್ಲಿ ಅತ್ಯಂತ ದೊಡ್ಡದಾದ ಮತ್ತು ಈಗಾಗಲೇ ೫೦೦೦ ವಿದ್ಯಾರ್ಥಿಗಳಿಗೆ ಶಿಕ್ಷಣ ಕೊಡುತಿರುವ ಹಿಂದೂ ವಿಶ್ವವಿದ್ಯಾಲಯವು ಇನ್ನೂ ಬೆಳೆಸಲ್ಪಡಲಿರುವದು. ಮಹಿಳಾ ವಿದ್ಯಾಲಯವನ್ನು ಮತ್ತು ಶಿಕ್ಷಕರ ತರಬೇತಿ ವಿದ್ಯಾಲಯವನ್ನು ಅಭಿವೃದ್ಧಿಸಲಾಗುವದು. ಶಿಕ್ಷಕಿಯರ ತರಬೇತಿ ವ್ಯವಸ್ಥೆಯನ್ನು ಮಾಡಲಿರುವರು. ಎಂಜಿನಿಯರಿಂಗ ವಿದ್ಯಾಲಯದಲ್ಲಿ ವಿಮಾನ ವಿದ್ಯೆಯ ವಿಭಾಗವನ್ನು ತೆರೆಯಲಾಗುವದು.

ಅಲಹಾಬಾದದಲ್ಲಿ ಡಾ. ಆರ್. ಎಸ್ ಪದಕಿಯವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಸಂಘದ ವತಿಯಿಂದ ಸಭೆ ಸೇರಿ ಶ್ರೀ ಬದಾಮಿಯವರ ನಿಧನದ ಬಗ್ಗೆ ದುಃಖ ಪ್ರದರ್ಶಿಸಲಾಯಿತು. ಈ ಸಭೆಗೆ ಬನಾರಸ ಹಿಂದೂ ವಿಶ್ವವಿದ್ಯಾಲಯದ ಕೆಲ ವಿದ್ಯಾರ್ಥಿಗಳೂ ಬಂದಿದ್ದರು.

ಕಾಶೀ ಸಂಸ್ಥಾನದ ಒಟ್ಟು ಉತ್ಪನ್ನ ೧೯೪೪-೪೫ ರಲ್ಲಿ ೬೮ ಲಕ್ಷ ರೂಪಾಯಿಗಳಿದ್ದು ವೆಚ್ಚ ೫೯ ಲಕ್ಷ ರೂಪಾಯಿಗಳಿವೆ. ಮಹಾರಾಜರ ಖಾಸಗೀ ವೆಚ್ಚವೇ ೩೪ ಲಕ್ಷ ರೂಪಾಯಿಗಳಿಗೆ ಬಂದಿದೆಂದು ಶಾಸನ ಸಭೆಯಲ್ಲಿ ಕಾರ್ಯದರ್ಶಿಗಳು ಹೇಳಿದರು.

ಸಂಯುಕ್ತ ಪ್ರಾಂತದಲ್ಲಿ ಜಿಲ್ಹೆಯಿಂದ ಜಿಲ್ಹೆಗೆ ಗೋದಿಯನ್ನು ಒಯ್ಯಲು ಇದ್ದ ನಿರ್ಬಂಧವನ್ನು ತೆಗೆದುಹಾಕಲಾಗಿದೆ. ಧಾನ್ಯದ ಸ್ಥಳಾಂತರಕ್ಕೆ ಅಪ್ಪಣೆ ಕೊಡುವ ಅಧಿಕಾರವನ್ನು ಜಿಲ್ಹಾಧಿಕಾರಿಗಳ ಕೈಯಿಂದ ತೆಗೆದು ಜಿಲ್ಹಾ ಸಮಿತಿಗಳ ಕಡೆಗೆ ಕೊಡಲಾಗುವದು.

## ಸಿಂಧ

ಸಿಂಧ ಶಾಸನ ಸಭೆಯಲ್ಲಿ ಈ ಮೊದಲು ಇದ್ದ ಕಾಂಗ್ರೆಸ್ಸಿನ ೨೧ ಸದಸ್ಯರನ್ನೆ ಮತ್ತೆ ನಿಲ್ಲಿಸಲು ಕಾಂಗ್ರೆಸ ಪಾರ್ಲಮೆಂಟರಿ ಬೋರ್ಡಿನವರು ನಿರ್ಧರಿಸಿದ್ದಾರೆ. ಇವರೆಲ್ಲರು ಅವಿರೋಧ ಆರಿಸಿ ಬರುವದಕ್ಕೆ ಅವಕಾಶ ಮಾಡಿಕೊಡಲು ಹಿಂದು ಮಹಾಸಭೆಯವರು ಚುನಾವಣೆಯನ್ನು ಹೋರಾಡಬಾರದಾಗಿ ನಿರ್ಧರಿಸಿದ್ದಾರೆ.

ಸಿಂಧ ಶಾಸನ ಸಭೆಯ ಯಾವತ್ತೂ ೩೫ ಮುಸಲ್ಮಾನ ಸ್ಥಳಗಳಿಗೆ ಹುರಿಯಾಳುಗಳನ್ನು ನಿಲ್ಲಿಸುವದನ್ನು ವಿಚಾರ ಮಾಡಲು ಕೇಂದ್ರ ಲೀಗ ಚುನಾವಣೆ ಮಂಡಳದವರು ಮುಂದಿನ ತಿಂಗಳ ಕರಾಚಿಗೆ ಹೋಗಲಿರುವರು. ಮತಭೇದದ ಮೂಲಕ ಪ್ರಾಂತಿಕ ಚುನಾವಣೆ ಮಂಡಳದ ರಚನೆಯಿನ್ನೂ ಆಗಿಲ್ಲ. ಈ ಸಲ ಶ್ರೀ ಜಿ ಎಂ ಸಯ್ಯದರೂ ಲೀಗದ ವಿರುದ್ಧ ಎಲ್ಲ ಸ್ಥಳಗಳಿಗೆ ಹುರಿಯಾಳುಗಳನ್ನು ನಿಲ್ಲಿಸಲಿರುವರು.

ಸಿಂಧದ ಗವರ್ನರರನ್ನು ಕೂಡಲೆ ಸ್ಥಳಾಂತರಿಸಬೇಕು ಎಂದು ಸಿಂಧ ಪ್ರಾಗತಿಕ ಮುಸ್ಲಿಂ ಜಮಾಯತದ ಅಧ್ಯಕ್ಷರಾದ ಶ್ರೀ ಶೇಖ ಅಬ್ದುಲ್ ಮಜೀದರು ಅಭಿಪ್ರಾಯಪಟ್ಟರುವರು. ಸರ್ ಫ್ರಾನ್ಸಿಸ್ ಮುಡಿಯವರು ರಾಜೀನಾಮೆ ಕೊಟ್ಟ ನಾಲ್ವರು ಮಂತ್ರಿಗಳನ್ನು ಮತ್ತೆ ನೇಮಿಸಿಕೊಂಡು ಬ್ರಿಟಿಶ್ ರಾಜ್ಯಘಟನೆ ಮತ್ತು ಬ್ರಿಟಿಶ್ ಚಕ್ರಾಧಿಪತ್ಯದ ಸಂಪ್ರದಾಯವನ್ನುಲ್ಲಂಘಿಸಿ ತಾವು ಬ್ರಿಟಿಶ್ ಸರಕಾರದ ಪ್ರತಿನಿಧಿಗಳಲ್ಲೆಂದು ತೋರಿಸಿಕೊಟ್ಟಿದ್ದಾರೆ. ಇಂಥ ಗವರ್ನರರಿರುವಾಗ ನ್ಯಾಯವಾದ ಚುನಾವಣೆಗಳು ನಡೆಯುತಿವೆಂಬ ಆಶೆಯೇಯಿಲ್ಲ ಎಂದು ಮುಂತಾಗಿ ಅಭಿಪ್ರಾಯಪಟ್ಟಿರುವರು.

ಜಮ್ಮೂದಲ್ಲಿ ೨೨ ನೇ ತಾರೀಕು ಜಾತೀಯ ಗಲಭೆ ಸಂಭವಿಸಿ ೪ ಜನ ಸತ್ತರು. ೧೨ ಜನರಿಗೆ ಗಾಯಗಳಾಗಿವೆ. ಕರ್ಫ್ಯೂ ಜಾರಿ ಮಾಡಲಾಗಿರುವದು. ಪೋಲೀಸ ಅಧಿಕಾರಿಗಳೂ ಸೈನ್ಯಾಧಿಕಾರಿಗಳೂ ಅಲ್ಲಿಗೆ ಹೋಗಿರುವರು.

## ಬಂಗಾಲ

ಕಲಕತ್ತೆಯಲ್ಲಿ ೨೩ ನೇ ತಾರೀಕು ಇರಿತದಿಂದ ೯ ಜನ ಸತ್ತರು. ೫೫ ಜನರಿಗೆ ಗಾಯಗಳಾದವು. ಕೆಲಕಡೆ ಲೂಟಿಯೂ ನಡೆದ ಸುದ್ದಿ ಇದೆ.

ಕಲಕತ್ತೆಯಲ್ಲಿ ಮುಸ್ಲಿಂರ ಪ್ರತ್ಯಕ್ಷ ಹೋರಾಟದ ನಿಮಿತ್ತ ಸಂಭವಿಸಿದ ದೊಂಬಿಯ ಸಂಬಂಧದಲ್ಲಿ ೪೬೦೨ ಜನರನ್ನು ಬಂಧಿಸಲಾಗಿದೆ. ಇದರಲ್ಲಿ ಪುಂಡರೆಂದು ಹೆಸರು ಪಡೆದವರು ೫೬೬ ಜನರಿದ್ದಾರೆ. ನಗರದಲ್ಲಿ ಶಾಂತತೆಯನ್ನು ಕಾಯ್ದುಕೊಳ್ಳಲು ೧೦ ಶಾಂತತಾ ಸಮಿತಿಗಳನ್ನು ಸ್ಥಾಪಿಸಲಾಗಿದೆ.

ಬಂಗಾಲದಲ್ಲಿ ಸದ್ಯಕ್ಕೆ ೧ ಲಕ್ಷ ಟನ್ ಅಕ್ಕಿ ಸಂಗ್ರಹವಿದೆ. ಅಕ್ಟೋಬರ ನವಂಬರ ತಿಂಗಳ ಪರಿಸ್ಥಿತಿ ಕಠಿನವಿದೆ. ಹೊರಗಿನಿಂದ ಅಕ್ಕಿ ಬರದಿದ್ದರೂ ಗೋವಿನಜೋಳ ಒಟ್ಟು ಬರುತ್ತದೆ. ಈ ಸಲ ಬೆಳೆ ಉತ್ತಮವಿರುವದರಿಂದ ಅಷ್ಟೊಂದು ವಿವಂಚನೆಗೊಳಗಾಗಬೇಕಿಲ್ಲ.

ನಡುಗಾಲ ಸರಕಾರ ಸ್ಥಾಪಿಸುವ ಜಾಣತನ ಮತ್ತು ಧೈರ್ಯ ತೋರಿದದ್ದಕ್ಕೆ ಬ್ರಿಟಿಶ್ ಸರಕಾರವನ್ನು ಅಭಿನಂದಿಸುವ ಮತ್ತು ಈ ಪ್ರಗತಿಯು ಲಕ್ಷಗಟ್ಲೆ ಹಿಂದುಗಳ ಸ್ವಾರ್ಥತ್ಯಾಗದಿಂದ ಸಾಧ್ಯವಾದುದನ್ನು ನೆನಪಿನಲ್ಲಿಟ್ಟುಕೊಂಡು ಸರಕಾರದವರು ಹಿಂದೂಗಳ ಸಹಾಯಕ್ಕೆ ನಿಲ್ಲದೇ ಬೇಕೆಂದೂ ಅವರನ್ನು ಕೊಲೆ ಹಾಗು ನರಮೇಧದಿಂದ ಉಳಿಸಬೇಕೆಂದೂ ಕೇಳುವ ಗೊತ್ತುವಳಿಗಳನ್ನು ಅ. ಭಾ. ಹಿಂದೂಮಹಾಸಭೆಯ ಕಾರ್ಯಕಾರಿ ಮಂಡಳದವರು ಸ್ವೀಕರಿಸಿದರು.

ಕಲಕತ್ತೆಯಲ್ಲಿ ೨೩ ನೇ ತಾರೀಕು ಮಧ್ಯಾಹ್ನದವರೆಗೆ ೨೩ ಇರಿತ ಪ್ರಕರಣಗಳು ಸಂಭವಿಸಿದ್ದು ೭ ಜನರಿಗೆ ತೀವ್ರ ಗಾಯಗಳಾಗಿವೆಂದು ಸುದ್ದಿ ಬಂದಿದೆ.

ಡಾಕಾದಲ್ಲಿ ೨೧ ನೇ ತಾರೀಖು ೮ ವರ್ಷದ ಓರ್ವ ಹುಡಿಗೆಯನ್ನೊಳಗೊಂಡು ಮೂವರು ಇರಿಯಲ್ಪಟ್ಟಿದ್ದಾರೆ. ಓರ್ವ ಫೌಜದಾರನು ಸಾದಾವೇಷದಲ್ಲಿ ಮೈಮನಸಿಂಗದಿಂದ ಉಗಿಬಂಡಿಯಲ್ಲಿ ಡಾಕಾಕ್ಕೆ ಹೊರಟಾಗ ಅವರ ಮೇಲೆ ಕೆಲವರು ದಾಳಿ ಮಾಡಿ ಅವರನ್ನು ಕೊಂದು ಅವರ ದೇಹವನ್ನು ಡಾಕಾ ಹತ್ತರ ಹೊರಗೆ ಒಗೆದದು ತಿಳಿದುಬಂದಿದೆ. ಹಿಂದಿನ ದಿನ ಇಬ್ಬರನ್ನು ಕೊಂದು ೪ ಮನೆಗಳಿಗೆ ಬೆಂಕಿ ಹಚ್ಚಲಾಯಿತು. ನಾಲ್ಕು ಹೆಣಗಳು ೨೧ ಕ್ಕೆ ಸಿಕ್ಕವು.

## ಬ್ರಹ್ಮದೇಶ

ಬ್ರಹ್ಮದೇಶದಲ್ಲಿ ೨೦ ಸಾವಿರ ಸರಕಾರಿ ನವಕರರು ಸಂಪು ಹೂಡಿದ್ದಾರೆ. ಇದರಲ್ಲಿ ಬಂದರಗಳಲ್ಲಿಯ ರೇಲ್ವೆಗಳಲ್ಲಿನ ಮತ್ತು ಅಂಚೆ ಹಾಗು ತಂತಿಖಾತೆಯ ನೋಕರರೂ ಇರುವರು. ಇವರೆಲ್ಲರಿಗೆ ಸಹಾನುಭೂತಿ ತೋರಲು ರಂಗೂನ ಮುನಸಿಪಾಲಿಟಿಯ ನೋಕರರು ಒಂದು ದಿವಸ ಸಂಪು ಮಾಡಿದರು. ಬ್ರಹ್ಮದೇಶದ ಇತಿಹಾಸದಲ್ಲಿಯೆ ಇದು ಅಪೂರ್ವವಾಗಿದೆ. ಪೋಲೀಸರೂ ೧೫ ದಿನಗಳಿಂದ ಸಂಪು ಮಾಡ್ಡಿರುವರು.

ಈ ಅಂಗಸಾನರ ಫ್ಯಾಸಿಸ್ಟ ವಿರೋಧಿ ಸಂಘದ ಬೇಡಿಕೆಗಳನ್ನು ಪೂರೈಸಿ ಹಿಂದುಸ್ತಾನದಲ್ಲಿಯಂತೆ ಬ್ರಹ್ಮದೇಶದಲ್ಲಿಯೂ ತಾತ್ಪೂರ್ತಿಕ ಸರಕಾರ ಸ್ಥಾಪಿಸಲು ಬ್ರಿಟಿಶ ಸರಕಾರ ಒಪ್ಪಿದ ಹೊರತು ಇಲ್ಲಿ ರಾಜಕೀಯ ಒಪ್ಪಂದ ಶಕ್ಯವಿಲ್ಲ ಎಂದು ಮಣಿಲಾಲ ದೋಶಿಯವರ ಅಭಿಪ್ರಾಯ.

ಬ್ರಹ್ಮದೇಶದ ಹಿಂದಿನ ಮುಖ್ಯಮಂತ್ರಿಗಳೂ ಮೈಯೋಚಿತ ಪಕ್ಷದ ಧುರೀಣರೂ ಆದ ಯು. ಸಾ. ಇವರು ತಮ್ಮ ಸೆಕ್ರೆಟರಿಯೊಂದಿಗೆ ೨೦ ನೇ ತಾರೀಕು ತಮ್ಮ ಪಕ್ಷದ ಕಚೇರಿಯಿಂದ ಕಾರಿನಲ್ಲಿ ಹೊರಟಾಗ ಹಿಂದಿನಿಂದ ಬಂದ ಒಂದು ಜೀಪದಿಂದ ಅವರ ಮೇಲೆ ಗುಂಡು ಹಾರಿಸಲಾಯಿತು. ಅದು ಬಡೆಯದೆ ಕಾರಿನ ಕಾಜಿಗೆ ಬಡೆಯಿತು. ಅವರ ಕಣ್ಣಿನ ಕೆಳಗೆ ಕಾಜಿನ ಚೂರು ನಟ್ಟು ರಕ್ತ ಸೋರಹತ್ತಿತು. ಕೂಡಲೆ ಅವರನ್ನು ಆಸ್ಪತ್ರೆಗೆ ಸಾಗಿಸಲಾಯಿತು.

# ಕರ್ನಾಟಕ

## ಧಾರವಾಡ

ಕಳೆದ ಮೂರು ವರ್ಷಗಳಿಂದ ಧಾರವಾಡದ ಜಯಕರ್ನಾಟಕ ಮಾಸಪತ್ರಿಕೆಯ ಸಹಾಯಕ ಸಂಪಾದಕರಾಗಿದ್ದ ಶ್ರೀ ಎಂ. ಜಿ. ವಿರುಪಾಕ್ಷನ್‌ರು ಆ ಕರ್ತವ್ಯದಿಂದ ನಿವೃತ್ತರಾಗಿದ್ದಾರೆ. ಈ ಬಗ್ಗೆ ಅವರೊಂದು ಪ್ರಕಟನೆ ಹೊರಡಿಸಿರುವರು.

ಡಾ. ನರಸಿಂಗರಾವ ಕವಲಗುಡ್ಡ ಇವರು ಸೇವಾನಿವೃತ್ತರಾದ್ದರಿಂದ ನರಗುಂದದಲ್ಲಿ ವಿಠೋಬ ಮಂದಿರದಲ್ಲಿ ೨೦ ಕ್ಕೆ ಸಭೆ ರಾ. ಬ. ಸಾವಕಾರ ವಕೀಲರ ಅಧ್ಯಕ್ಷತೆಯಲ್ಲಿ ಸೇರಿ ಅವರನ್ನು ಬೀಳ್ಕೊಡಲಾಯಿತು.

ಹುಬ್ಬಳ್ಳಿಯ ಶ್ರೀ ಪಿ. ಬಿ. ಪವಾರ ಇವರು ವೈಮಾನಿಕ ಶಿಕ್ಷಣ ಪಡೆದು ಫ್ಲಾಯಿಂಗ ಆಫೀಸರರಾಗಿರುವಷ್ಟೆ. ಅವರನ್ನೀಗ ಹಿಂದುಸ್ತಾನ ಸರಕಾರದವರು ಗ್ಲೊಸ್ಟರಶಾಯರದಲ್ಲಿ ಆರ್. ಎ. ಎಫ್. ಯುನಿಟನಲ್ಲಿ ಫಾಯಟರ ಲೀಡರ ಶಿಕ್ಷಣ ಪಡೆಯಲು ಕಳಿಸಿದ್ದಾರೆ. ಹಿಂದುಸ್ತಾನದಿಂದ ಕೆಲವೇ ವೈಮಾನಿಕರು ಗ್ಲೊಸ್ಟರ ಶಾಯರಕ್ಕೆ ಹೋಗಿರುವರು.

## ಬೆಳಗಾವಿ

ಬೀಡಿಯ ಪೋಲೀಸ ಗೌಡರು ೩೦ರೂಪಾಯಿ ಲಂಚಪಡೆಯುವಾಗ ಶ್ರೀ ಹೆಗಡೆ ಫೌಜದಾರರು ಅವರನ್ನು ಹಿಡಿದರು.

ಬೆಲ್ಲದ ನಿಯಂತ್ರಣ ಹೋದ್ದರಿಂದ ವ್ಯಾಪಾರಸ್ಥರು ಬೆಲ್ಲವನ್ನು ಎಲ್ಲಿಯೋ ಸಾಗಿಸಿಬಿಟ್ಟದ್ದರಿಂದ ಬೆಳಗಾವಿ ಪೇಟೆಯಲ್ಲಿ ಬೆಲ್ಲವೆ ಸಿಕ್ಕದಂತಾಗಿದೆ. ಬೇರೆ ಕಡೆಗೂ ಬೆಲ್ಲದ ಧಾರಣೆ ಹೇರಿಗೆ ೭೫—೮೦ ರೂಪಾಯಿಗಳ ವರೆಗೆ ಏರಿದೆ.

ಬೆಳಗಾವಿಯಲ್ಲಿ ಶ್ರೀ ಕೇಶವರಾವ ಗೋಖಲೆಯವರು ಸಂಸ್ಥಾಪಿಸಿದ ಮಜಲಿಯೊಳಗಿ ಸ್ಮಾರಕ ಮಂಡಲದವರಲ್ಲಿ ಪುಸ್ತಕ ಕಪಾಟು ಮೊದಲಾದ ಇತರ ವೆಚ್ಚ ಬಿಟ್ಟು ೨೬೦೦ ರೂಪಾಯಿ ಶಿಲ್ಕು ಇದೆ. ಇದಲ್ಲದೆ ೯೭೫ ರೂಪಾಯಿ ಇನಾಮುಗಳಿಗಾಗಿ ಬೇರೆ ತೆಗೆದಿಡಲಾಗಿವೆ. ಶ್ರೀ ಬೆಳವಿ ಮತ್ತು ಹಿರೇಕರರು ದೊಡ್ಡ ಪ್ರಮಾಣದಲ್ಲಿ ಈ ಸ್ಮಾರಕ ಮಾಡಲು ನಿರ್ಧರಿಸಿದ್ದರಿಂದ ವೆಚ್ಚವನ್ನು ಬಿಟ್ಟು ೧೦ ಸಾವಿರ ರೂಪಾಯಿಗಳನ್ನು ಈ ಉಭಯತರ ಕಡೆಗೆ ಒಪ್ಪಿಸಬೇಕೆಂದು ಶ್ರೀ ಗೋಖಲೆಯವರು ಗೊತ್ತುಪಡಿಸಿದ್ದಾರೆ. ಎಲ್ಲರೂ ಇದಕ್ಕೆ ಸಹಾಯ ಮಾಡಬೇಕೆಂದು ಶ್ರೀ ಗೋಖಲೆಯವರು ಬಿನ್ನವಿಸುತ್ತಾರೆ.

## ಉತ್ತರ ಕನ್ನಡ

ಭಟಕಳದ ನಗರಸಭೆಯ ಚುನಾವಣೆಯಲ್ಲಿ ಮುಸಲ್ಮಾನರಿಗಿರುವ ಒಟ್ಟು ೯ ಸ್ಥಳಗಳಿಗೆ ಮಜಲಿಸ ಇ ಇಸ್ಲಾಹೆ ಅಂಜೀಮ ಸಂಸ್ಥೆಯ ಪರವಾಗಿ ಉಮೇದವಾರರನ್ನು ನಿಲ್ಲಿಸಲಾಗಿತ್ತು. ಅವರೆಲ್ಲ ಅವಿರೋಧವಾಗಿ ಆರಿಸಿ ಬಂದಿದ್ದಾರೆ.

ಭಟಕಳದ ಪ್ರಮುಖ ವ್ಯಾಪಾರಿಗಳೂ ಫಾರೆಸ್ಟ ಕಂಟ್ರಾಕ್ಟರರೂ ಆಗಿದ್ದ ಶ್ರೀ ವಾಮನ ನಾಯಕ ಇವರು ವಯಸ್ಸಿನ ೯೮ ನೇ ವರುಷದಲ್ಲಿ ಇದೆ ೧೭ ನೇ ತಾರೀಕು ಸ್ವರ್ಗಸ್ಥರಾದರು. ಹಿಂದು ಮುಸಲ್ಮಾನ ವ್ಯಾಪಾರಸ್ಥರೆಲ್ಲ ತಾವಾಗಿಯೆ ಅಂಗಡಿಗಳನ್ನು ಮುಚ್ಚಿದ್ದರು. ಅಂಜುಮಾನ ಹಾಯಸ್ಕೂಲಿನವರೂ ಉಳಿದ ಎಲ್ಲ ಪ್ರಾಥಮಿಕ ಶಾಲೆಗಳವರೂ ಸಾಲೆಗಳಿಗೆ ಬಿಡುವು ಕೊಟ್ಟದ್ದರು.

ಹಳ್ಯಾಳದ ಕಾಂಗ್ರೆಸ ಪ್ರಮುಖರೂ ಲೀಗ ಧುರೀಣರೂ ಸ್ವಾಂಕಿತದಿಂದ ಒಂದು ಪ್ರಕಟನೆ ಹೊರಡಿಸಿ ಹಿಂದೂ ಮುಸಲ್ಮಾನ ಬಾಂಧವರೆಲ್ಲ ಐಕ್ಯದಿಂದ ಇರಬೇಕೆಂದೂ ಸುಳ್ಳು ಸುದ್ದಿಗಳನ್ನು ಕೇಳಿ ಯಾರೂ ವಿಕಾರವಶರಾಗಬಾರದೆಂದೂ ಪುಂಡಾಟಿಕೆ ಮಾಡುವ ಜನರಿಗೆ ಯಾರೂ ಉತ್ತೇಜನ ಕೊಡಬಾರದೆಂದೂ ಮುಂತಾಗಿ ಕೇಳಿಕೊಂಡಿದ್ದಾರೆ.

## ವಿಜಾಪುರ

ಗದುಗಿನ ರಾವಸಾಹೇಬ ಪಂಡೂಲಾಲ ಚವ್ಹಾಣರು ತಮ್ಮ ದಿವಂಗತ ಅಣ್ಣಂದಿರಾದ ಚಂದೂಲಾಲರ ಸ್ಮರಣಾರ್ಥ ಸೋ. ಸ. ಕ್ಷತ್ರಿಯ ಸಮಾಜದ ಬಡ ವಿದ್ಯಾರ್ಥಿಗಳಿಗಾಗಿ ಬಾಗಲಕೋಟೆಯಲ್ಲಿ ಚಂದೂಲಾಲ ತುಕಾರಾಮ ಚವ್ಹಾಣ ಪುಕ್ಕಟೆ ವಸತಿಗೃಹ ಮತ್ತು ಭೋಜನಾಲಯ ಸ್ಥಾಪನೆಗೆ ೧೬೮೦೦ ರೂಪಾಯಿಗಳ ಉದಾರ ಕೊಡುಗೆ ಕೊಟ್ಟಿದ್ದಾರೆ.

ಸುಧಾರಿಸಿದ ಬಿಳಿ ಜೋಳ ಗೋದಿ ಮತ್ತು ಕಡಲೆ ಬೀಜಗಳು ಒಕ್ಕಲತನದ ಖಾತೆಯವರು ತೆಗೆದ ಡಿಪೋಗಳಲ್ಲಿ ಮಾತ್ರ ಸಿಕ್ಕುವವು. ಇಂಥ ಡಿಪೋಗಳು ಧಾರವಾಡ ವಿಜಾಪುರ ಬೆಳಗಾವಿ ಜಿಲ್ಹೆಗಳಲ್ಲಿ ಎಲ್ಲ ಕಡೆಗೆ ತೆಗೆಯಲ್ಪಟ್ಟಿರುತ್ತವೆ. ಯೋಗ್ಯ ಧಾರಣೆಯಿಂದ ರೋಖ ಹಣಕ್ಕೆ ಈ ಬೀಜಗಳು ದೊರೆಯುವವು.

ಗುಳೇದಗುಡ್ಡದ ವ್ಯಾಪಾರಸ್ಥರು ನಗರಕ್ಕೆ ವಿದ್ಯುದ್ದೀಪ ಪೂರೈಸುವೆವೆಂದು ಹೇಳಿ ಜನರಿಂದ ಸುಮಾರು ೬೦ ಸಾವಿರ ರೂಪಾಯಿ ಕೂಡಿಸಿದ್ದಾರೆ. ಎರಡು ಮೂರು ತಿಂಗಳಾದರೂ ಏನೂ ಕೆಲಸ ಆಗಿಲ್ಲ. ಬೇಗನೆ ಕೆಲಸ ಪ್ರಾರಂಭಿಸಿರೆಂದು ರೊಕ್ಕ ಕೊಟ್ಟ ಜನರು ಕೇಳಹತ್ತಿದ್ದಾರೆಂದು ಸಿದ್ದಪ್ಪ ನಾಯನೇಗಲಿ ಇವರು ತಿಳಿಸುತ್ತಾರೆ.

ಕರ್ನಾಟಕದಲ್ಲಿಯ ವತನದಾರ ಕುಲಕರ್ಣಿ ಸಂಘದವರು ಸರಕಾರದವರು ತಮ್ಮ ಬೇಡಿಕೆಗಳನ್ನು ಮನ್ನಿಸದಿದ್ದದಕ್ಕಾಗಿ ಬೇರೆ ಉದ್ಯೋಗದಲ್ಲಿ ತೊಡಬೇಕೆಂದು ನಿರ್ಧರಿಸಿ ಅದಕ್ಕಾಗಿ ೩ ತಿಂಗಳ ರಜೆಯ ಮೇಲೆ ಹೋಗಬೇಕೆಂದು ಗೊತ್ತುಪಡಿಸಿದ್ದಾರೆ. ಈ ಸಂಬಂಧದಲ್ಲಿ ಕುಲಕರ್ಣಿ ಸಂಘದ ಅಧ್ಯಕ್ಷರಾದ ಶ್ರೀ ಕುಲಕರ್ಣಿ ಸ್ವಾಮಿರಾಯರು ಇದೇ ೩೦ ಕ್ಕೆ ಬೆಳಗಾವಿಯಲ್ಲಿ ಮುಖ್ಯ ಮಂತ್ರಿ ಖೇರರನ್ನು ಭೆಟ್ಟಿಯಾಗಲಿರುವರು.

## ಸಂಸ್ಥಾನಗಳು

ಸರ್ ಮಿರ್ಜಾ ಇಸ್ಮಾಯಿಲರವರು ಇದೇ ೩೦ ಕ್ಕೆ ತುಂಗಭದ್ರಾ ಅಣೆಕಟ್ಟನ್ನು ನೋಡುವದಕ್ಕಾಗಿ ಬರತಕ್ಕವರಿದ್ದಾರೆ. ಆ ಕಾಲಕ್ಕೆ ಕೊಪ್ಪಳಕ್ಕೂ ಭೆಟ್ಟಿಕೊಡಬೇಕೆಂದು ಅವರನ್ನು ಕೇಳಿಕೊಳ್ಳಲಿರುವರು.

ಮೈಸೂರ ಸರಕಾರದ ಗೃಹಮಂತ್ರಿಗಳಾದ ಶ್ರೀ ಶೇಷಾದ್ರಿಯವರು ತುಮಕೂರ ಜಿಲ್ಹೆಯಲ್ಲಿ ಪ್ರವಾಸ ಕೈಕೊಂಡು ಅನೇಕ ಸ್ಥಳಗಳಿಗೆ ಭೆಟ್ಟಿಕೊಟ್ಟು ತುಮಕೂರಿನ ಇಂಟರ ಕಾಲೇಜಿನ ಸಂಘದ ಪ್ರಾರಂಭೋತ್ಸವದಲ್ಲಿ ಭಾಷಣ ಮಾಡುತ್ತ ಪ್ರಪಂಚದ ಶಾಂತಿಗೆ ಅಹಿಂಸೆಯೆ ಉತ್ತಮ ಸಾಧನವೆಂದು ಹೇಳಿದರು.

ತುಮಕೂರಿನ ವರ್ತಕರಾದ ಶ್ರೀ ಜಿ. ಎಂ. ಸಿದ್ದರಾಮಣ್ಣ ಇವರು ತುಮಕೂರ ಅನಾಥಾಶ್ರಮಕ್ಕೆ ೧॥ ಲಕ್ಷ ರೂಪಾಯಿ ಬೆಲೆಬಾಳುವ ಆಸ್ತಿಯನ್ನು ಕೊಟ್ಟದ್ದಲ್ಲದೆ ತಾವು ವ್ಯಾಪಾರದಲ್ಲಿ ಗಳಿಸಿದ ಹಣವನ್ನೆಲ್ಲ ಅನಾಥಾಶ್ರಮಕ್ಕೆ ದಾನ ಮಾಡುವದಾಗಿ ವಾಗ್ದಾನವಿತ್ತರು.

ಈಸೂರಲ್ಲಿ ಕಸ್ತೂರಬಾ ಶಿಕ್ಷಣ ಶಿಬಿರದ ಉದ್ಘಾಟನೆ ಸಮಾರಂಭ ಶ್ರೀ ಎಚ್. ಸಿ. ದಾಸಪ್ಪನವರಿಂದ ಜರುಗಿತು. ಆ ಕಾಲಕ್ಕೆ ಅವರು ಶಿಕ್ಷಣ ಶಿಬಿರದ ಉದ್ದೇಶವನ್ನು ವಿವರಿಸಿ ಹೇಳಿದರು.

ಮೈಸೂರು ಸಂಸ್ಥಾನದ ಹಿಂದುಮಹಾಸಭೆಯ ೫ ನೇ ಅಧಿವೇಶನ ೧೯೪೭ ನೇ ಜನೆವರಿ ೨೬ ನೇ ತಾರೀಕು ತ್ಯಾಮಗೊಂಡ್ಲುವಿನಲ್ಲಿ ಜರಗುವದು. ಶ್ರೀ ಎಲ್. ಬಿ. ಭೋಪಟಕರರು ಇದರ ಉದ್ಘಾಟನ ಸಮಾರಂಭ ಜರಗಿಸುವರು.

**ಸಂಯುಕ್ತ ಕರ್ನಾಟಕಕ್ಕೆ ಚಂದಾದಾರರಾಗಿರಿ**

# ನಡುಗಾಲ ಸರಕಾರ ರಚಿಸಿದ್ದಕ್ಕೆ ಒಪ್ಪಿಗೆ
# ನಡುಗಾಲ ಸರಕಾರದಲ್ಲಿದ್ದವರು ಕಾರ್ಯಸಮಿತಿಯ ಸದಸ್ಯರಾಗುಳಿಯಬಲ್ಲರು
## ಅಖಿಲ ಭಾರತ ಕಾಂಗ್ರೆಸ ಸಮಿತಿಯ ಮಹತ್ವದ ನಿರ್ಣಯ
### ಅಧ್ಯಕ್ಷ ಜವಾಹರಲಾಲರ ನಿವೃತ್ತಿ

ಅಖಿಲ ಭಾರತ ಕಾಂಗ್ರೆಸ ಸಮಿತಿಯ ಸಭೆ ೨೩ ನೇ ತಾರೀಕು ಸಾಯಂಕಾಲ ದಿಲ್ಲಿಯಲ್ಲಿ ಶ್ರೀ ರಾಮದಾಸ ಕಾಲೇಜ ಭವನದಲ್ಲಿ ಪಂಡಿತ ಜವಾಹರಲಾಲರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ೨೦೦ ಕ್ಕಿಂತ ಹೆಚ್ಚು ಸದಸ್ಯರು ಸಭೆಗೆ ಬಂದಿದ್ದರು. ಪಂಡಿತ ಜವಾಹರಲಾಲರು ಪ್ರಾರಂಭ ಭಾಷಣ ಮಾಡುತ್ತ ತಾವು ಅಧ್ಯಕ್ಷಪದವನ್ನು ತ್ಯಜಿಸುವುದಾಗಿ ಹೇಳಿದರು. ಈ ಅಧ್ಯಕ್ಷ ಸ್ಥಳಕ್ಕಿಂತ ಹೆಚ್ಚಿನದು ಸಿಕ್ಕುತ್ತಿದೆಂದು ನಾನಿದನ್ನು ತ್ಯಜಿಸುತ್ತಿರುವೆನೆಂದು ಮಾತ್ರ ಯಾರೂ ಭಾವಿಸಬಾರದು. ಕಾಂಗ್ರೆಸ್ಸಿನ ಇತಿಹಾಸದಲ್ಲಿ ಹೊಸ ಹೆಜ್ಜೆಯನ್ನು ಈಗ ಇಡಲಾಗಿರುವದು. ಈ ಹೆಜ್ಜೆಯು ಕಾಂಗ್ರೆಸ್ಸಿನ ಪರಂಪರಾಗತ ಧೋರಣಕ್ಕಿಂತ ತೀರ ಭಿನ್ನವಿರುವದು. ಹಿಂದುಸ್ತಾನ ಸರಕಾರದ ಬಹುಭಾಗದ ಅಧಿಕಾರವನ್ನು ಈಗ ನಾವು ವಹಿಸಿರುವೆವು. ಇನ್ನೂ ಸಂಪೂರ್ಣ ಸ್ವಾತಂತ್ರ್ಯವನ್ನು ನಾವು ಗಳಿಸಬೇಕಾಗಿದೆಂಬುದರಲ್ಲಿ ಸಂದೇಹವಿಲ್ಲ ಎಂದು ಮುಂತಾಗಿ ಹೇಳಿ ಕಾಂಗ್ರೆಸ್ಸು ನಡುಗಾಲ ಸರಕಾರದಲ್ಲಿ ಏಕೆ ಭಾಗವಹಿಸಲು ನಿರ್ಧರಿಸಿತು ಘಟನಾ ಸಮಿತಿಯಲ್ಲಿ ಭಾಗವಹಿಸಲು ಏಕೆ ಮುಂದಾಗಬೇಕಾಯಿತೆಂಬುದನ್ನು ವಿವರಿಸಿದರು. ಅನಂತರ ಅವರು ನಡುಗಾಲ ಸರಕಾರದಲ್ಲಿದ್ದವರು ಕಾಂಗ್ರೆಸ ಕಾರ್ಯ ಸಮಿತಿಯ ಸದಸ್ಯರಾಗುಳಿಯಬಲ್ಲರೋ ಹೇಗೆಂಬುದನ್ನು ಅ. ಭಾ. ಕಾಂಗ್ರೆಸ ಸಮಿತಿ ನಿರ್ಧರಿಸಬೇಕಾಗಿದೆ. ಅವರು ಕಾಂಗ್ರೆಸ ಕಾರ್ಯ ಸಮಿತಿಯಲ್ಲಿರುವದು ಸಮಂಜಸವೊ ಅಲ್ಲವೊ ಎಂಬುದು ನನಗೆ ಗೊತ್ತಿಲ್ಲ. ನಿಜವಾಗಿ ನೋಡಿದರೆ ಒಬ್ಬ ಮನುಷ್ಯನೇ ಎರಡೂ ಹೊಣೆಯನ್ನು ವಹಿಸಲಾರನು. ಅತ್ತ ನಡುಗಾಲ ಸರಕಾರದ ಮಂತ್ರಿಯಾಗಿ ಇತ್ತ ಕಾಂಗ್ರೆಸ ಕಾರ್ಯ ಸಮಿತಿಯ ಸದಸ್ಯರಾಗುವದು ಕಷ್ಟಸಾಧ್ಯವಾಗುವದು. ಎ. ಆಯ. ಸಿ. ಸಿಯು ಈ ಸಮಸ್ಯೆಯನ್ನು ನಿರ್ಧರಿಸಬೇಕಾಗಿದೆ.

### ಕಾಂಗ್ರೆಸ್ಸಿನ ಧೋರಣೆಯೇ ನಡುಗಾಲ ಸರಕಾರದ ಧೋರಣ

ಮೂರು ವಾರಗಳ ಹಿಂದೆ ಕಾಂಗ್ರೆಸ್ಸು ಕೇಂದ್ರದಲ್ಲಿ ಅಧಿಕಾರ ವಹಿಸಿತು. ನಡುಗಾಲ ಸರಕಾರ ತನ್ನ ಪರರಾಷ್ಟ್ರ ಹಾಗು ಅಂತರಿಕ ಧೋರಣವನ್ನು ಇನ್ನೂ ಪ್ರಕಟಿಸಿಲ್ಲ. ಈ ಸರಕಾರದವರೂ ಕಾಂಗ್ರೆಸ ಸಮಿತಿಯ ಧೋರಣವನ್ನು ವಹಿಸುವದೆಂಬಲ್ಲಿ ಸಂದೇಹವಿಲ್ಲ. ನಡುಗಾಲ ಸರಕಾರವನ್ನು ಸ್ಥಾಪಿಸಿ ಕಾಂಗ್ರೆಸ್ಸು ಮಹತ್ವದ ಹೊಣೆಯನ್ನು ಹೊತ್ತುಕೊಂಡಿದೆ. ಕಾಂಗ್ರೆಸ್ ಮತ್ತು ಹಿಂದುಸ್ತಾನಗಳನ್ನು ಇಡೀ ಜಗತ್ತೇ ಇಂದು ನಿರೀಕ್ಷಿಸುತ್ತದೆ. ಹಿಂದುಸ್ತಾನವಿಂದು ಬೇರೆ ರಾಷ್ಟ್ರಗಳಿಂದ ಪ್ರತ್ಯೇಕಿಸಲ್ಪಟ್ಟಿಲ್ಲ. ಜಗತ್ತಿನ ಯಾವದೆ ಮೂಲೆಯಲ್ಲಾದ ಘಟನೆಯ ಪರಿಣಾಮ ಹಿಂದುಸ್ತಾನಕ್ಕೂ ತಗಲುವದು. ಅದರಂತೆ ನಮ್ಮ ಧೋರಣೆಯ ಪರಿಣಾಮವೂ ಜಗತ್ತಿನ ಮೇಲಾಗುವದು.

ಶಾಂತಿಸ್ಥಾಪನೆಗಾಗಿ ಹಿಂದುಸ್ತಾನ ಶಕ್ತಿಮೀರಿ ದುಡಿಯುವದು ಹಾಗೆ ಮಾಡುವಾಗ ಅದು ಸ್ವತಂತ್ರ ರಾಷ್ಟ್ರದಂತೆ ವರ್ತಿಸುವದು ಹಿಂದುಸ್ತಾನ ವಸಾಹತು ರಾಷ್ಟ್ರಗಳ ವಿಮೋಚನೆಗಾಗಿ ಹೋರಾಡುವದು. ಜಾಗತಿಕ ಸಮಸ್ಯೆ ಅತ್ಯಂತ ಜಟಿಲವಾಗಿದೆ. ಶಾಂತಿ ಪರಿಷತ್ತು ಹಾಗು ಯುಕ್ತರಾಷ್ಟ್ರ ಸಂಸ್ಥೆಗಳು ಹಕ್ಕಿಗಳ ಪಂಜರಗಳಾಗಿವೆ. ಅಲ್ಲಿ ಗೊಂದಲವೆದ್ದಿದೆ ಹೀಗಾಗಿ ನಮಗೆ ನಿಜ ಪರಿಸ್ಥಿತಿಯ ಅರಿವು ಉಂಟಾಗಿಲ್ಲ. ಅಮೇರಿಕೆ ಹಾಗು ರಶಿಯಗಳೆಂಬ ಎರಡು ಪ್ರಬಲ ರಾಷ್ಟ್ರಗಳು ಇಂದು ಇಡೀ ಜಗತ್ತನ್ನು ಕುಣಿಸುತ್ತಿವೆಂಬುದು ನಮಗೆ ಮನದಟ್ಟಾಗಿದೆ. ಇವೆರಡೇ ರಾಷ್ಟ್ರಗಳು ಜಗತ್ತಿಗೆ ಶಾಂತಿ ತರಬಲ್ಲವು; ಇಲ್ಲವೆ ಜಗತ್ತನ್ನು ನಾಶಗೊಳಿಸಬಲ್ಲವು.

### ಕಮ್ಯುನಿಸ್ಟರ ಅನುಚಿತ ಧೋರಣ

ಅನಂತರ ಪಂಡಿತ ಜವಾಹರಲಾಲರು ಹಿಂದುಸ್ತಾನದ ಕಮ್ಯುನಿಸ್ಟರ ಕಡೆಗೆ ಹೊರಳಿ ಹಿಂದುಸ್ತಾನಕ್ಕೆ ಕಠಿನ ಕಾಲ ಬಂದಾಗಲೂ ಕಾಂಗ್ರೆಸ್ಸಿನ ಧೋರಣವನ್ನು ಅವರು ಟೀಕಿಸುತ್ತಿರುವರು. ಕಾಂಗ್ರೆಸ ಕಮ್ಯುನಿಸ್ಟ ತಿಕ್ಕಾಟವನ್ನು ನೋಡಿ ಹಿಂದುಸ್ತಾನ ಕಮ್ಯುನಿಸ್ಟ ರಾಷ್ಟ್ರವಾದ ರಶಿಯಾದ ಕಡು ವಿರೋಧಿಯೆಂದು ಯಾರೂ ಭಾವಿಸಬಾರದು. ನಮ್ಮ ನಡುಗಾಲ ಸರಕಾರದ ಪರರಾಷ್ಟ್ರ ಧೋರಣ ಸ್ವತಂತ್ರ ರಾಷ್ಟ್ರದ ಧೋರಣವಾಗಿರುವದು. ಜಾಗತಿಕ ಶಾಂತಿ ಸ್ಥಾಪನೆಯೇ ನಮ್ಮ ಪರರಾಷ್ಟ್ರ ಧೋರಣದ ಮುಖ್ಯ ಧ್ಯೇಯ. ಕಾರಣ ಜಾಗತಿಕ ಪರಿಷತ್ತುಗಳಲ್ಲಿ ನಮ್ಮ ಪ್ರತಿನಿಧಿಗಳು ಶಾಂತಿ ಸ್ಥಾಪಕರಂತೆ ವರ್ತಿಸಬೇಕಾಗಿದೆ ನಮಗೆ ಶಾಂತಿ ಬೇಕಾಗಿದೆ, ಯುದ್ಧವಲ್ಲ ಎಂದು ಹೇಳಿದರು. ಅನಂತರ ಅವರು ಗುಡ್ಡಗಾಡು ಜನರ ಬಗ್ಗೆ ನಡುಗಾಲ ಸರಕಾರದ ಧೋರಣೆಯೇನೆಂಬುದನ್ನು ಸ್ಪಷ್ಟೀಕರಿಸುತ್ತ ಈಗ ಗುಡ್ಡಗಾಡ ಜನರನ್ನು ನಾವು ನಮ್ಮ ಬಾಂಧವರಂತೆ ನೋಡಿಕೊಳ್ಳುವೆವು. ಅವರೇನೂ ಹೊರಗಿನವರಲ್ಲ. ನಮ್ಮ ಒಡನಾಡಿಗಳೇ ಬಲುಚಿಸ್ತಾನದ ಪ್ರಶ್ನೆಯನ್ನು ನಡುಗಾಲ ಸರಕಾರ ಬಿಡಿಸಬೇಕಾಗಿದೆಂದು ಮುಂತಾಗಿ ಹೇಳಿ ಮಾತು ಮುಗಿಸಿದರು.

### ನಡುಗಾಲ ಸರಕಾರ ರಚನೆಗೆ ಒಪ್ಪಿಗೆ

ಅನಂತರ ಮೌಲಾನಾ ಅಬುಲ್ ಕಲಂ ಅಜಾದರು, ಕಾಂಗ್ರೆಸ್ ನಡುಗಾಲ ಸರಕಾರವನ್ನು ಸ್ಥಾಪಿಸಬೇಕು ಎಂದು ಕಾಂಗ್ರೆಸ್ ಕಾರ್ಯಸಮಿತಿಯು ಪಾಸು ಮಾಡಿದ ಗೊತ್ತುವಳಿಗೆ ಅಖಿಲ ಭಾರತ ಕಾಂಗ್ರೆಸ್ ಸಮಿತಿ ಒಪ್ಪಿಗೆ ಕೊಡುತ್ತಿದೆ ಎಂಬ ಮುಖ್ಯ ಗೊತ್ತುವಳಿಯನ್ನು ಮಂಡಿಸಿ ಅದರ ಮೇಲೆ ಸಮಂಜಸವಾದ ಭಾಷಣ ಮಾಡಿದರು. ಡಾ. ಪಟ್ಟಾಭಿ ಸೀತಾರಾಮಯ್ಯನವರು ಅದಕ್ಕೆ ಬೆಂಬಲ ಕೊಟ್ಟರು. [illegible] "ಪೂರ್ಣ ಸ್ವಾತಂತ್ರ್ಯದ ಘೋಷಣೆ ಮಾಡಲು, ವಿದೇಶೀ ಸೇನೆಯನ್ನು ಹಿಂದುಸ್ತಾನದಿಂದ ಹೊರ ತೆಗೆದುಕೊಳ್ಳಲು ವೈಸರಾಯ ಪದವಿಯನ್ನು ರದ್ದುಗೊಳಿಸಲು, ಮತ್ತು ಪ್ರೌಢ ಮತದಾನ ಪದ್ಧತಿಯನ್ವಯ ಘಟನಾ ಸಮಿತಿಯ ಚುನಾವಣೆಗಳನ್ನು ನಡೆಸಲು ಬ್ರಿಟನ್‌ಕ್ಕೆ ನಡುಗಾಲ ಸರಕಾರ ಒತ್ತಾಯ ಮಾಡಬೇಕೆಂಬ ಉಪಸೂಚನೆಯನ್ನು ಶ್ರೀ ಅನ್ಸಾರ ಹರವಾಣಿ ಹಾಗು ಅಚ್ಯುತ ಪಟವರ್ಧನರು ಮಂಡಿಸಿದರು ಆದರೆ ಅಧ್ಯಕ್ಷರು ಅವನ್ನು ನಿಯಮಬಾಹ್ಯ ಮಾಡಿದರು. ತರುವಾಯ ಶ್ರೀಗಳಾದ ವಿಶ್ವಂಭರ ದಯಾಳರು; ಶೀಲಭದ್ರರು ಗೊತ್ತುವಳಿಯನ್ನು ವಿರೋಧಿಸಿದರು. ಸೋಶಾಲಿಸ್ಟರು ತಟಸ್ಥವುಳಿಯುವದಾಗಿ ಶ್ರೀ ಜಯಪ್ರಕಾಶ ನಾರಾಯಣರು ಸಾರಿದರು. ಸರದಾರ ಪ್ರತಾಪಸಿಂಗರು ಗೊತ್ತುವಳಿಗೆ ಬೆಂಬಲಕೊಟ್ಟರು. ಇಷ್ಟಕ್ಕೆ ಸಭೆ ಚಹಾಪಾನಕ್ಕಾಗಿ ಮುಂದರಿಯಿತು.

ಚಹಾಪಾನದ ನಂತರ ಚರ್ಚೆ ಮುಂದುವರಿದು ಪ್ರಚಂಡ ಬಹುಮತದಿಂದ ಗೊತ್ತುವಳಿ ಸ್ವೀಕೃತವಾಯಿತು. ಅನುಕೂಲ ೨೫೫ ಪ್ರತಿಕೂಲ ೧೨ ಮತಗಳು ಬಿದ್ದವು.

### ಕಾಂಗ್ರೆಸ್ ಕಾರ್ಯಸಮಿತಿ ಸದಸ್ಯತ್ವದ ಪ್ರಶ್ನೆ

ಪಂಡಿತ ಗೋವಿಂದ ವಲ್ಲಭ ಪಂತರು, ನಡುಗಾಲ ಸರಕಾರದಲ್ಲಿ ಅಧಿಕಾರ ವಹಿಸಿದ ಮಾತ್ರಕ್ಕೆ ಯಾರನ್ನೂ ಕಾಂಗ್ರೆಸ್ ಕಾರ್ಯಸಮಿತಿಯ ಅಥವಾ ಕಾಂಗ್ರೆಸ್ಸಿನ ಯಾವದೆ ಸಂಸ್ಥೆಯ ಸಭಾಸದತ್ವದಿಂದ ಹೊರಗಿಡತಕ್ಕದ್ದಲ್ಲ. ಎಂಬ ಗೊತ್ತುವಳಿಯನ್ನು ಮಂಡಿಸಿದರು. ಪಂಡಿತ ಪಂತರು ಈ ಗೊತ್ತುವಳಿಯ ಅವಶ್ಯಕತೆಯನ್ನು ವಿವರಿಸಿದರು. ಮೌಲಾನಾ ಅಜಾದರು ಈ ಬಗ್ಗೆ ಕಾರ್ಯಸಮಿತಿಯಲ್ಲಿ ಚರ್ಚೆಯಾಗಿದೆಂದು ಹೇಳಿ ನಡುಗಾಲ ಸರಕಾರದಲ್ಲಿದ್ದವರು ಕಾರ್ಯಸಮಿತಿಯ ಸದಸ್ಯರಾಗುಳಿಯಬಾರದೆಂದು ತಮ್ಮ ವೈಯಕ್ತಿಕ ಅಭಿಪ್ರಾಯವಾಗಿದೆಂದು ಹೇಳಿದರು. ರಾವಸಾಹೇಬ ಪಟವರ್ಧನ, ಜಯಪ್ರಕಾಶ ನಾರಾಯಣ, ಪುರುಷೋತ್ತಮ ತ್ರಿಕಮದಾಸ ಮೊದಲಾದ ೧೦ ಸದಸ್ಯರು ಗೊತ್ತುವಳಿಯನ್ನು ವಿರೋಧಿಸಿದರು. ಡಾ. ಪ್ರಫುಲ್ಲಚಂದ್ರ ಘೋಷ ಮೊದಲಾದವರು ಅನುಕೂಲ ಮಾತಾಡಿದರು. ಚರ್ಚೆಯಿನ್ನೂ ಸಾಗಿರುವಾಗಲೆ ಸಭೆ ಮರುದಿನಕ್ಕೆ ಮುಂದರಿಯಿತು.

### ಗೊತ್ತುವಳಿ ಸ್ವೀಕೃತ

೨೪ ನೇ ತಾರೀಕು ಮುಂಜಾನೆ ಮತ್ತೆ ೨॥ ಗಂಟೆ ಚರ್ಚೆಸಾಗಿ ಪ್ರಚಂಡ ಬಹುಮತದಿಂದ ಗೊತ್ತುವಳಿ ಸ್ವೀಕೃತವಾಯಿತು. ೧೩೫ ಸದಸ್ಯರು ಗೊತ್ತುವಳಿಯ ಪರವಾಗಿಯೂ ೮೦ ಸದಸ್ಯರು ಪ್ರತಿಕೂಲವಾಗಿಯೂ ಮತ ಕೊಟ್ಟರು. ಪಂಡಿತ ಪಂತರು ಚರ್ಚೆಗೆ ಕೊಟ್ಟ ಉತ್ತರ ಮತ್ತು ಅಧ್ಯಕ್ಷರು ಗೊತ್ತುವಳಿಯನ್ನು ಮತಕ್ಕೆ ಹಾಕುವಾಗ ಮಾಡಿದ ಭಾಷಣ ಅತ್ಯಂತ ಮಾರ್ಮಿಕ ಮತ್ತು ಸಮಯೋಚಿತವಾಗಿದ್ದವು. ಟೀಕೆಗಳಿಗೆ ಉಚಿತ ಉತ್ತರಗಳನ್ನು ಮುಖಂಡದ್ವಯರು ಕೊಟ್ಟರು.

ಅಧಿಕಾರೇತರ ಗೊತ್ತುವಳಿಗಳನ್ನೆಲ್ಲ ಕಾರ್ಯ ಸಮಿತಿಗೆ ಒಪ್ಪಿಸಬೇಕೆಂದು ಅಧ್ಯಕ್ಷರು ನಿರ್ಣಯ ಕೊಟ್ಟರು. ಈ ರೀತಿಯಾಗಿ ಇತಿಹಾಸ ಪ್ರಸಿದ್ಧ ಅಧಿವೇಶನ ಜಯಘೋಷದಲ್ಲಿ ಕೊನೆಗಂಡಿತು.

## ಲೀಗು ಘಟನಾ ಸಮಿತಿಯನ್ನು ಪ್ರವೇಶಿಸಬಹುದು

(೪ನೇ ಪುಟದಿಂದ)

"ಗುಂಪು"ಗಳ ವಿಷಯದಲ್ಲಿ ಪಂಡಿತ ನೆಹರೂ ಅವರು ತಮ್ಮ ಆಕಾಶವಾಣಿ ಭಾಷಣದಲ್ಲಿ ಕೊಟ್ಟ ಆಶ್ವಾಸನೆಯೇ ಜಿನ್ನಾ ಸಾಹೇಬರಿಗೆ ಘಟನಾ ಸಮಿತಿಯನ್ನು ಪ್ರವೇಶಿಸುವ ದಾರಿಯನ್ನು ಮಾಡಿ ಕೊಡಬಹುದು. ಆದರೆ ಜಿನ್ನಾ ಅವರು ಪ್ರಯತ್ನ ಮಾಡಿದರೆ" ಈ ಹಿಂದೆ ಮೊನ್ನೆದಿನ ನೆಹರೂ ಅವರು ಮೊನ್ನೆ ಅಸಾಂ ಜಾತೀಯ ಸಭೆಯ ಪ್ರತಿನಿಧಿಗಳಿಗಿತ್ತ ಆಶ್ವಾಸನವನ್ನು ಗುಡ್ಡದಂತೆ ಮಾಡಿ ಮತ್ತೆ ಮುನಿದು ಕೂಡಲೂ ಬಹುದು. ಅಸಾಮ ಜಾತೀಯ ಸಭೆಯ ಪ್ರತಿನಿಧಿಗಳಿಗೆ ನೆಹರೂ ಅವರು ಕೊಟ್ಟ ಸಂದರ್ಶನದಲ್ಲಿ ಅವರು "ಗುಂಪು" ಮತ್ತು "ವಿಭಾಗ" ಗಳಿಗೆ ಸ್ಪಷ್ಟವಾದ ಭೇದವನ್ನು ಕಲ್ಪಿಸಿದ್ದಾರೆ. ಬ್ರಿಟಿಶ ಮಂತ್ರಿಮಂಡಲದ ಯೋಜನೆಯಲ್ಲಿರುವ "ವಿಭಾಗ" (ಸೆಕ್ಶನ್) ಮತ್ತು "ಗುಂಪು" (ಗ್ರೂಪ್) ಶಬ್ದಗಳನ್ನು ಒಂದಕೊಂದು ಬೆರಸಿ ಅಪಾರ್ಥ ಕಲ್ಪಿಸಬಾರದು. ಕಾಂಗ್ರೆಸ್ಸು ಘಟನಾ ಸಮಿತಿಯ ಅ—ಬ—ಕ ವಿಭಾಗಗಳಲ್ಲಿ ಕುಳಿತು ಗುಂಪುಗಳ ರಚನೆಯ [illegible] ಚರ್ಚಿಸಲು ಮಾತ್ರ ವಾಗ್ದಾನ ಮಾಡಿದೆ ಹೊರತು ಗುಂಪುಗಳ ರಚನೆಗೆ ಸಮ್ಮತಿ ಕೊಟ್ಟಂತಾಗಿಲ್ಲ. ಗುಂಪುಗಳಲ್ಲಿ ಸೇರುವದು ಬಿಡುವದು ಆಯಾ ಪ್ರಾಂತಕ್ಕೇ ಸೇರಿದ್ದು. ಎಂಬದಾಗಿ ನೆಹರೂ ಅವರು ವಿವರಿಸಿದರು. ಅರ್ಥಾತ್ ಘಟನಾ ಸಮಿತಿಯ "ವಿಭಾಗ" ಗಳು ಯೋಜಿಸುವ "ಗುಂಪಿನ" ಘಟನೆ ತೃಪ್ತಿಕರವಾಗಿದ್ದರೆ ಮಾತ್ರ ಕಾಂಗ್ರೆಸ್ಸು ಅದಕ್ಕೆ ಸಮ್ಮತಿಸಬಹುದು ಹೊರತು ಅನ್ಯಥಾ ಅಲ್ಲ. ಇದರಿಂದ ಮತ್ತೆ ಸಂತಪ್ತರಾಗಿ ಜಿನ್ನಾ ಸಾಹೇಬರು ಮುಖತಿರುಗಿಸುವ ಸಂಭವವೂ ಇದೆ.

### ಹಾರೂನರ ಸಾಹಸಗಳು

ಸಿಂಧ ಮುಸ್ಲಿಂ ಲೀಗ್ ಅಧ್ಯಕ್ಷರಾದ ಯುಸುಫ ಅಬ್ದುಲ್ಲಾ ಹಾರೂನರು ರಶಿಯಾದ ಸಹಾಯದಿಂದ ಪಾಕಿಸ್ತಾನವನ್ನು ಗಳಿಸಬಹುದೆಂಬ ಆಶೆಯನ್ನು ಹಲವುಬಾರಿ ಅಂದು ತೋರಿಸಿದಾರೆ. ಅವರೀಗ ಇಂಗ್ಲಂಡಿಗೆ ಹೋಗಿ ಅಲ್ಲಿ ಲೀಗ್ ದೃಷ್ಟಿಕೋನಕ್ಕೆ ಬೆಂಬಲವನ್ನು ಗಳಿಸುವದರಲ್ಲಿ ಆಸಕ್ತರಾಗಿದ್ದಾರೆ. ಅಲ್ಲಿನ ಕಮ್ಯುನಿಸ್ಟ ನಾಯಕರೊಡನೆ ಮಾತುಕತೆ ನಡೆಸಿದ್ದಾರೆ. ಟೋರಿ ಪ್ರತಿಗಾಮಿಗಳನ್ನೂ ಕಂಡಿರುವರೆಂದು ಖಂಡಿತ ನಂಬಬಹುದು. ಇಂಗ್ಲಂಡಿನಲ್ಲಿ ಲೀಗ ಪ್ರಚಾರಕ್ಕಾಗಿ ಒಂದು ಕಾರ್ಯಾಲಯವನ್ನೆ ತೆರೆಯುವ ಯೋಜನೆಯನ್ನೂ ಸಿದ್ಧಗೊಳಿಸಿ ಅ. ಭಾ. ಲೀಗಿಗೆ ಕಳಿಸಿದ್ದಾರೆ. ಇದಕ್ಕಿಂತಲೂ ಮಹತ್ವದ ಕೆಲಸವೊಂದನ್ನು ಅವರಿನ್ನು ಕೈಕೊಳ್ಳುವರು. ಪ್ಯಾರಿಸ ಶಾಂತಿ ಪರಿಷತ್ತಿನಲ್ಲಿ ಹಿಂದೀ ಮುಸ್ಲಿಮರ ಪ್ರಶ್ನೆಯನ್ನು ಎತ್ತಬೇಕೆಂದು ಅವರ ಸಾಹಸ. ಮೊಲಟೊರು ಇದನ್ನು ಕಿವಿಗೊಡಸಿದ್ದರೆ ಹಾರೂನರು ರಶಿಯಾಕ್ಕೇ ಹಾರುವವರಿದ್ದಾರೆ. "ಕಾಂಗ್ರೆಸ್—ಬ್ರಿಟಿಶ ಸಂಧಿಗೆ ಅಮೇರಿಕೆಯ ಬೆಂಬಲವೂ ಇದೆಯೆಂದು ಅವರಿಗೆ ಈಗ ಮನವರಿಕೆಯಾಗಿದೆಯಂತೆ. ಮುಸ್ಲಿಮರಿಗೆ ಸಹಾಯ ಮಾಡಬಹುದಾದ ಇನ್ನುಳಿದ ಒಂದು ಪ್ರಬಲ ರಾಷ್ಟ್ರವೆಂದರೆ ರಶಿಯಾ ಎಂದು ಅವರ ಮತ. ಆದರೆ ಹಿಂದೀ ಕಮ್ಯುನಿಸ್ಟರನ್ನು ಕುರಿತು ಏನೆನ್ನಾದರೂ ಅಂತವರಾಗಿದ್ದ ಪಕ್ಷದಲ್ಲಿ ಹಾರೂನರ ಅರ್ಜಿಗೆ ಮಾಸ್ಕೋದ ಭಾಗ್ಯವಿಧಾತರು ಕಿವಿಗೊಡುವ ಸಂಭಾವ್ಯತೆ ಕಡಿಮೆಯೆಂದು ಹೇಳಬಹುದಾಗಿದೆ.

—೧೪ನೇ ಪುಟಕ್ಕೆ

## ಬೆಂಗಳೂರು-ಮೈಸೂರು

ಮೈಸೂರು ವಿಧಾಯಕ ಸಭೆಯ ಕಾಂಗ್ರೆಸ್ ಪಕ್ಷದ ಕಾರ್ಯಕಾರಿ ಮಂಡಲದವರು ಸಭೆ ಸೇರಿ (ತಾ. ೨೨) ಸಂಸ್ಥಾನದಲ್ಲಿ ಹೊಣೆಗಾರ ಸರಕಾರವನ್ನು ಸ್ಥಾಪಿಸಲು ಪೂರ್ವ ಭಾವಿಯಾಗಿ ಈ ತಿಂಗಳ ಅಂತ್ಯದಲ್ಲಿ ಸೇರಲಿರುವ ಶಾಸನ ಸಭಾಧಿವೇಶನದೊಳಗಾಗಿಯೆ ನಡುಗಾಲ ಸರಕಾರವನ್ನು ಸ್ಥಾಪಿಸಬೇಕೆಂದೂ ಈಗಿನ ಕಾಯಿದೆಯಲ್ಲಿಯೆ ಸ್ವಲ್ಪ ತಿದ್ದುಪಡಿ ಮಾಡಿದರೆ ಇದು ಸಾಧ್ಯವಿದೆಯೆಂದೂ ಘಟನಾ ಸಮಿತಿಗೆ ಲೋಕನಿಯುಕ್ತರನ್ನೆ ಕಳಿಸಬೇಕೆಂದೂ ಮಹಾರಾಜರನ್ನು ಕೇಳಿಕೊಳ್ಳುವ ಗೊತ್ತುವಳಿಗಳನ್ನು ಮಾಡಿದ್ದಾರೆ.

ಮೈಸೂರಿನ ಆಹಾರ ಪರಿಸ್ಥಿತಿ ತೀರ ಕುತ್ತಿನಲ್ಲಿದೆಯಾದುದರಿಂದ ಮೈಸೂರಿಗೆ ಕಳಿಸಬೇಕಾಗಿದ್ದ ಅಕ್ಕಿಯನ್ನು ಬೇರೆಡೆಗೆ ಹೊರಳಿಸಿದ್ದರ ಬದಲು ಪುನಃ ಹೇರಳ ಅಕ್ಕಿಯನ್ನು ಮೈಸೂರಿಗೆ ಕಳಿಸಿ ಸಾಮೂಹಿಕ ಉಪವಾಸವನ್ನು ಪ್ರತಿಬಂಧಿಸಬೇಕೆಂದು ಮೈಸೂರ ಸಂಸ್ಥಾನ ಕಾಂಗ್ರೆಸ್ಸಿನ ಹಿಂದಿನ ಅಧ್ಯಕ್ಷರಾದ ಶ್ರೀ ಕೆ ಟಿ. ಭಾಷ್ಯಂ ಅವರು ಆಹಾರಮಂತ್ರಿ ಡಾ. ರಾಜೇಂದ್ರ ಪ್ರಸಾದರಿಗೆ ತಂತಿ ಕಳಿಸಿದ್ದಾರೆ.

ನಡುಗಾಲ ಸರಕಾರವನ್ನು ರಚಿಸಿದ ಬಗ್ಗೆ ಪಂ. ಜವಾಹರಲಾಲರನ್ನು ಅಭಿನಂದಿಸುವ ಗೊತ್ತುವಳಿಯೊಂದು ಬೆಂಗಳೂರು ಜಿಲ್ಲಾ ಬೋರ್ಡಿನಲ್ಲಿ ಸ್ವೀಕರಿಸಲ್ಪಟ್ಟಿತು.

ಹದಿನೈದನೆಯ ನಿಖಿಲ ಕರ್ನಾಟಕ ಆಯುರ್ವೇದ ಸಮ್ಮೇಲನ ಡಿಸೆಂಬರ ಕೊನೆಯ ವಾರದಲ್ಲಿ ಗದುಗಿನಲ್ಲಿಸೇರಲಿರುವದೆಂದು ಮೈಸೂರಿನಲ್ಲಿರುವ ಆಯುರ್ವೇದ ಪರಿಷತ್ತಿನ ಕಾರ್ಯಾಲಯದಿಂದ ಪ್ರಕಟನೆ ಹೊರಟಿದೆ.

ಮೈಸೂರು ಪ್ರಜಾಪ್ರತಿನಿಧಿ ಸಭೆಯ ಹಕ್ಕುಬಾಧ್ಯತೆಗಳ ಸಮಿತಿಯ ಸಭೆ ಮೊನ್ನೆ ತಾ. ೨೦ ಕ್ಕೆ ಮಂತ್ರಿಗಳಾದ ಓ. ಎನ್. ಶರೀಫರ ಅಧ್ಯಕ್ಷತೆಯಲ್ಲಿ ಸೇರಿ ೧೯೪೫ ಜೂನ್ ಅಧಿವೇಶನದಲ್ಲಿ ದಿವಾಣ ಅಧ್ಯಕ್ಷರ ನಿರ್ಣಯವನ್ನು ಪ್ರತಿಭಟಿಸಿ ಸಭಾತ್ಯಾಗ ಮಾಡಿದ್ದ (ಕಾಂಗ್ರೆಸ್) ಪ್ರ. ಪ್ರ. ಸಭಾ ಸದಸ್ಯರ ಒಂದು ದಿನದ ಭತ್ತೆಗೆ ಕತ್ತರಿ ಹಾಕಿದ್ದು ಅಕ್ರಮವಾಗಿತ್ತೆಂದೂ ಅದನ್ನು ಅವರಿಗೆ ಕೊಡಿಸಬೇಕೆಂದೂ ಸರ್ವಾನುಮತ ನಿರ್ಣಯವಾಯಿತು.

ಸಂಸ್ಥಾನದಲ್ಲಿ ಆಹಾರ ಪರಿಸ್ಥಿತಿ ಕಠಿನವಾಗಿರುವದರಿಂದ ಈ ಸಲದ ಮೈಸೂರು ದಸರಾ ಉತ್ಸವ ಅಷ್ಟು ವಿಜೃಂಭಣೆಯಿಂದ ನಡೆಯುವದಿಲ್ಲ ಮಹಾರಾಜರು ಜಂಬೂ ಸವಾರಿಯನ್ನು ರದ್ದುಗೊಳಿಸಿರುವದರಿಂದ ದಸರೆಯಲ್ಲಿದ್ದ ಉತ್ಸಾಹವೇ ಹೋಗಿಬಿಟ್ಟಿದೆ.

ಹಳ್ಳಿಯಿಂದ ಹಳ್ಳಿಗೆ ಹೋಗುವ ಮಾರ್ಗಗಳ ರಚನೆಗಾಗಿ ಮೈಸೂರು ಸರಕಾರದವರು ೬ ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಿದ್ದಾರೆ. ಈ ಹಣವನ್ನು ಜಿಲ್ಲಾ ವಾರು ಹೀಗೆ ಹಂಚಲಾಗಿದೆ. ಬೆಂಗಳೂರು ೫೦೦೦೦ ಮೈಸೂರು ೩೨೦೦೦ ತುಮಕೂರು ೪೦೦೨೦ ಕೋಲಾರ ೩೦೦೦೦ ಮಂಡ್ಯ ೧೦೦೦೦೦ ಹಾಸನ ೩೦೦೦೦ ಕಡೂರು ೩೫೦೦೦ ಶಿವಮೊಗ್ಗ ೭೫೦೦೦ ಚಿತ್ರದುರ್ಗ ೧೦೦೦೦೦ ಕೊಲ್ಲೇಸಪೇಟೆ ಗ್ರಾಮಾಂತರ ಹಿತ ಕೇಂದ್ರ ೨೦೦೦೦ ದೊಡ್ಡ ಬಳ್ಳಾಪುರ ೨೦೦೦೦ ಆನಂದಪುರಂ ೪೦೦೦೦ ರಿಝರ್ವ ೪೦೦೦೦.

ಮೈಸೂರು ಸಂಸ್ಥಾನದಲ್ಲಿ ಈಗಿರುವ ಆಹಾರ ಸಂಗ್ರಹ ಹೊರಗಿನಿಂದ ಒಂದು ಕಾಳುಕೂಡ ಬಾರದಿದ್ದರೂ ನವೆಂಬರ ೧೫ ನೆ ತಾರೀಕಿನ ವರೆಗೆ ಸಾಲುವದೆಂದು ಮೈಸೂರು ಆಹಾರ ನಿರ್ದೇಶಕರು ಪ್ರಕಟಿಸಿದ್ದಾರೆ. ಸಪ್ಟೆಂಬರ ತಿಂಗಳಿಗಾಗಿ ಹಿಂದುಸ್ತಾನ ಸರಕಾರ ೨೩೦೦೦ ಟನ್ ಆಹಾರವನ್ನು ಮೈಸೂರಿಗೋಸ್ಕರ ತೆಗೆದಿಟ್ಟಿದೆಯೆಂದೂ ಹೈದರಾಬಾದಿನಿಂದ ೨೦೦೦ ಟನ್ ಅಕ್ಕಿ ೧೦೦೦ ಟನ್ ನುಚ್ಚಕ್ಕಿ ೬೧೦೦೦ ಟನ್ ಚಿಲ್ಲರೆ ಧಾನ್ಯಗಳು ೪೦೦೦ ಟನ್ ಸೆಜ್ಜೆ ಇಷ್ಟರಲ್ಲೆ ಬರಬಹುದೆಂದೂ ಇವೆಲ್ಲ ಒದಗಿದರೆ ಮುಂದಿನ ಸುಗ್ಗಿಯ ವರೆಗೆ ಸುಸೂತ್ರವಾಗಿ ಸಾಗಿಸಬಹುದೆಂದೂ ಅವರು ಹೇಳಿದ್ದಾರೆ. ದ್ವಿದಳ ಧಾನ್ಯ ಮತ್ತು ಬೆಲ್ಲದ ನಿಯಂತ್ರಣದ ವಿಚಾರ ನಡೆದಿದೆಯೆಂದು ಅವರು ತಿಳಿಸಿರುವರು.

ಭದ್ರಾವತಿಯಲ್ಲಿ ಒಂದು ಟೆಲಿಫೋನ ಎಕ್ಸಚೇಂಜ ಸ್ಥಾಪಿಸುವ ವಿಚಾರ ಸರಕಾರದ ಪರಿಶೀಲನೆಯಲ್ಲಿದ್ದು ಇದಕ್ಕಾಗಿ ೫೫೦೦೦ ರೂಪಾಯಿ ಅಂದಾಜು ಮಾಡಲ್ಪಟ್ಟಿದೆ.

ಬೆಂಗಳೂರು ನಗರ ಗುಡ್ಸಶೆಡ್ ರಸ್ತೆಯಲ್ಲಿ ೨೫ ವರ್ಷ ವಯಸ್ಸಿನ ರಾಮಸ್ವಾಮಿ ನಾಯಕರ ಎಂಬಾತನು ಫೌಂಡರಿಯಲ್ಲಿ ಕೆಲಸ ಮಾಡುತ್ತಿದ್ದಾಗ ಕುಲುಮೆಯಲ್ಲಿ ಆಸ್ಫೋಟನೆಯಾಗಿ ತಕ್ಷಣ ಮೃತನಾದನು.

ತಾ. ೧೭ ಕ್ಕೆ ಮೈಸೂರಲ್ಲಾದ ಅಸಾಧ್ಯ ಮಳೆಯಿಂದ ಚರಂಡಿಗಳು ತುಂಬಿಹರಿಯುತ್ತಿದ್ದಾಗ ನಗರದ ವೀಣೆ ಶೇಷಣ್ಣ ಓಣಿಯಲ್ಲಿ ಬರುತಿದ್ದ ಮೂವರು ಚಿಕ್ಕ ಹುಡುಗಿಯರು ದಾರಿಗಾಣದೆ ಚರಂಡಿಯಲ್ಲಿ ಬಿದ್ದರು. ಅವರಲ್ಲಿಬ್ಬರನ್ನು ಪಕ್ಕದ ಹೋಟೆಲಿನವರು ಹೇಗಾದರೂ ರಕ್ಷಿಸಿದರು. ಮೂರನೆ ಹುಡುಗಿ ಬಳಿದುಕೊಂಡು ಹೋಗಿ ಬಿಟ್ಟಳು. ಮರುದಿನ ಅವಳ ಹೆಣ ಸಿಕ್ಕಿತು.

ಮೈಸೂರು ಕಾಂಗ್ರೆಸ್ ನಾಯಕರಾದ ಶ್ರೀ ಎನ್. ಸಿ. ತಿಮ್ಮಾರೆಡ್ಡಿಯವರನ್ನು ಸೆಂಟ್ರಲ್ ಜೈಲಿನಿಂದ ಬಿಡುಗಡೆ ಮಾಡಲಾಗಿದೆ. ಆಪಾದಿತರು ಮಾಡಿದ್ದ ಅಪೀಲಿನ ಮೇಲೆ ಸೆಷನ್ಸ್ ನ್ಯಾಯಾಧೀಶರು ಶ್ರೀ ರೆಡ್ಡಿಯವರು ತಪಿತಸ್ಥರೆಂದು ತೀರ್ಮಾನಿಸಿ ಈಗ ಅವರು ಅನುಭವಿಸಿರುವಷ್ಟು ಶಿಕ್ಷೆಯೇ ಸಾಕೆಂದು ತೀರ್ಪಿತ್ತು ಅವರನ್ನು ಬಂಧನದಿಂದ ಬಿಡುಗಡೆ ಮಾಡಲು ಅಪ್ಪಣೆ ಮಾಡಿದರು.

## ವ್ಯಾಪಾರ ಪ್ರಪಂಚ

### ಮುಂಬಯಿ ಶೇರ ಪೇಟೆ

ತಾ ೨೫ — ಮುಂಬಯಿ ಪೇಟೆಯಲ್ಲಿ ಈಗ ಕೆಲವು ದಿನಗಳಿಂದ ಹಲವು ಕಾರಣಗಳು ಸೇರಿ ಬೆಲೆಗಳನ್ನು ಮೇಲೆ ಕೆಳಗೆ ಎಳೆಯುತ್ತಿವೆ. ಟಾಟಾ ಉಕ್ಕಿನ ಕಾರಖಾನೆಯ ಸಂಪಿನ ಸುದ್ದಿ, ಮತ್ತು ಅದರಲ್ಲಿ ಕೂಲಿಕಾರರಿಗೆ ಅನುಕೂಲವಾದ ನಿರ್ಣಯವಾದ ಸುದ್ದಿ, ಆರ್ಥಿಕ ಮಂತ್ರಿ ಭಾಭಾ ಅವರು ವಾಣಿಜ್ಯ ವಿಸ್ತರಣೆಗೆ ಅನುಕೂಲವಾದ ಧೋರಣೆಯನ್ನು ಬಿತ್ತರಿಸಿದ್ದು ಮೊದಲಾದ ಸಂಗತಿಗಳಿಂದ ಪೇಟೆಯಲ್ಲಿ ಸ್ವಲ್ಪ ಆಶಾದಾಯಕ ವಾತಾವರಣವುಂಟಾಗಿದ್ದರೂ ಕೆಲ ವ್ಯಾಪಾರಸ್ಥರು ಬೆಲೆಗಳು ಇನ್ನೂ ಇಳಿಯಬಹುದೆಂಬ ನಂಬಿಕೆಯಿಂದಿದ್ದಾರೆ. ಹೀಗಾಗಿ ಕಳೆದಗುರುವಾರ ೨೮೩೦—೦—೦ ಕ್ಕಿಳಿದಿದ್ದ ಟಾಟಾ ಡೆಫರ್ಡ ಪಾಲುಗಳು ಮುಂದೆ ೩೦೪೦—೦—೦ ಕ್ಕೇರಿ ಪುನಃ ೨೯೭೦—೦—೦ ಕ್ಕಿಳಿದು ಮತ್ತೆ ೩೦೫೦—೦—೦ ಕ್ಕೆ ಬಂದವು. ಆದರೆ ಇತಿಹಾಸದಲ್ಲೆ ಮೊದಲನೆ ಬಾರಿ ಟಾಟಾ ಡೆಫರ್ಡ ಪಾಲುಗಳಿಗಿಂತ ಮುಂಬಯಿ ಡಾಯಿಂಗ್ ಪಾಲುಗಳು ಏರಿಕೆಯಲ್ಲಿ ನಿಲ್ಲುವಂತಾಗಿದೆ. ೨೮೩೦—೦—೦ ರಲ್ಲಿದ್ದ ಅವು ೩೧೮೦—೦—೦ ರ ವರೆಗೂ ಹೋಗಿ ೩೧೩೫—೦—೦ ಕ್ಕಿಳಿದವು. ಜವಳಿ ಪಾಲುಗಳೂ ತುಸು ಸುಧಾರಿಸಿವೆ. ೩೯೮—೦—೦ ರಿಂದ ಫಿನ್ಲೆ ೪೩೩—೦—೦ ರ ವರೆಗೇರಿ ೪೨೨—೦—೦ ಕ್ಕಿಳಿದು ೪೩೨-೦-೦ ಕ್ಕೇರಿತು. ಕೋಹಿನೂರು ೮೭೪.೦.೦ ರಿಂದ ೯೫೨—೦—೦ ಕ್ಕೇರಿ ೯೩೦-೦-೦ ಕ್ಕಿಳಿದು ೯೫೮—೦—೦ ಕ್ಕೇರಿದೆ. ಸ್ವದೇಶಿ ೬೯೮-೦—೦ ರಿಂದ ೭೬೫—೦—೦ ಕ್ಕೇರಿತು. ಗೋಕಾಕ ೩೭೦-೦-೦ ರಿಂದ ೪೨೬—೦—೦ ಕ್ಕೇರಿ ೪೨೦—೦—೦ ರಲ್ಲಿದೆ. ಸಿಂಧ್ಯಸ್ಟೀಮು ೪೪-೨-೦ ರಿಂದ ೪೮—೬—೦ ಕ್ಕೂ ಅಸೋಸಿಯೇಟೆಡ ಸಿಮೆಂಟು ೨೪೦—೦—೦ ರಿಂದ ೨೪೮—೪—೦ ಹೋಗಿವೆ. ಬ್ಯಾಂಕುಗಳಲ್ಲಿ ಸೆಂಟ್ರಲ ೧೨೪-೦-೦ ರಿಂದ ೧೩೧-೦-೦ ಕ್ಕೂ ಇಂಪೀರಿಯಲ್ ಎಸ್ ಬಿ ೨೭೦೦-೦-೦ ರಿಂದ ೨೮೭೭-೮-೦ಕ್ಕೇರಿದರೆ ರಿಝರ್ವ ೧೫೫—೦—೦ ರಿಂದ ೧೫೧-೦-೦ ಕ್ಕಿಳಿದವು.

ಸರಕಾರಿ ಸಾಲಪತ್ರಗಳಲ್ಲಿ ಜಿ. ಪಿ. ನೋಟು ೧೦೩-೮-೦ ರಿಂದ ೧೦೪-೫-೦ ಕ್ಕೇರಿದವು. ಆದರೆ ೧೯೪೭-೫೦ ರ ೩॥ ದರ ಸಾಲಪತ್ರ ೧೦೨-೬-೦ ರಿಂದ ೧೦೨-೯-೦ ಕ್ಕೆ ಮಾತ್ರ ಹೋಯಿತು.

### ಚಿನ್ನ ಬೆಳ್ಳಿ

ಇಂಗ್ಲಂಡಿನಿಂದ ಬೆಳ್ಳಿ ಗಟ್ಟಿಗಳು ಹಿಂದುಸ್ತಾನಕ್ಕೆ ಹೊರಟಿವೆಯೆಂಬ ನಂಬಿಕೆಯಿಂದ ಕಳೆದವಾರ ಬೆಳ್ಳಿಯ ದರ ಬಹಳ ಇಳಿದಿದ್ದರೂ ಅದು ಬರುವವರೆಗೆ ಪೇಟೆಯಲ್ಲಿಯ ಕೊರತೆಯ ಲಾಭ ಪಡೆದು ತೇಜಿ ವ್ಯಾಪಾರಿಗಳು ಅದನ್ನು ಮೇಲೆತ್ತಲು ಸಮರ್ಥರಾದರು. ಹೀಗೆ ೧೬೩-೨-೦ ರಲ್ಲಿದ್ದ ತಯಾರಿ ಬೆಳ್ಳಿ ೧೬೯-೧೪.೦ ರ ವರೆಗೂ ಹೋಗಿದೆ. ವಾಯದೆ ೧೬೪—೧೪—೦. ಚಿನ್ನದ ಬೆಲೆಗಳಲ್ಲಿ ಬಹಳ ಏರಿಳಿತವಿಲ್ಲ. ೯೮-೨-೦ ರಿಂದ ತಯಾರಿ ಚಿನ್ನ ೯೯—೧೦—೦ ಕ್ಕೇರಿತು. ವಾಯದಾ ೯೭-೧೦-೦ ಸಾವರೀನ ೬೯-೮-೦.

### ಅರಳೆ

ಈಚೆಗೆ ಚೀನಕ್ಕೆ ಕಳಿಸಿದ ಅರಳೆಗೆ ಖಂಡಿಗೆ ನೂರಿನ್ನೂರು ರೂಪಾಯಿ ಹೆಚ್ಚು ದೊರಕಿರುವದರಿಂದ ಅರಳೆಯ ಕನಿಷ್ಠ ಪರಮಾವಧಿ ಧಾರಣೆಗಳನ್ನು ಹೆಚ್ಚಿಸಬೇಕೆಂದು ಈಸ್ಟ ಇಂಡಿಯಾ ಅಸೋಸಿಯೇಶನ್ನಿನವರು ಸರಕಾರವನ್ನು ಕೇಳಿಕೊಂಡಿದ್ದಾರೆ. ವಿದೇಶಗಳಿಂದ ಹಿಂದೀ ಅರಳೆಗೆ ಗಿರಾಕಿಯಿದೆ. ಹೊಸ ಜನೆವರಿ ಅರಳೆ ೪೩೯-೮-೦ ರಿಂದ ೪೫೦—೦—೦ ರ ವರೆಗೂ ಹೋಗಿ ೪೪೮—೦—೦ ಕ್ಕಿಳಿಯಿತು. ಮಾರ್ಚ ೪೪೬—೧೨—೦ ರಿಂದ ೪೫೬—೦—೦ ಕ್ಕೇರಿದೆ.

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೧೫-೦-೦ |
| ಅಗಸಿ | ೨೪-೧-೦ |
| ಅಗಸಿ ಎಣ್ಣೆ | ೧೫-೧೨-೦ |

### ಸಾಂಗಲಿ ಪೇಟೆ

| | |
|---|---|
| ಬೆಲ್ಲ ಬಂಗಾಲಿ ಮಣ ರೂ. | ೧೪-೧೬ |
| ಅರಿಷಣ ಹೇರು | ೮೫-೯೩ |
| ಶೇಂಗಾ ಖಂಡಿ ,, | ೯೪-೯೫ |
| ಮೆಣಸಿನಕಾಯಿ ಹೇರು ,, | ೨೩೦ |
| ದೇಶಿ ತಂಬಾಕು ಹೇರು | ೧೦೦-೨೦೦ |
| ತಂಬಾಕ ಪಂಢರಪುರಿ ,, | ೧೫೦-೨೨೫ |
| ತಂಬಾಕು ಅಕೋಳ(ಹೇರು) | ೨೫೦-೩೭೫ |

### ಶಿವಮೊಗ್ಗೆ

| | |
|---|---|
| ಅಡಿಕೆ ದೇಶಾವರ ನಂ ೧ ಮಣ ೧ಕ್ಕೆ | ೩೩-೩೬ |
| ,, ,, ೨ | ೨೮-೩೩ |
| ರಾಜಾ ಅಲವು | ೩೨-೩೪ |
| ಚೆಟ್ಟ | ೨೨-೨೪ |
| ಮೆಣಸು | ೨೨-೨೪ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೩೦೦-೩೦೫ |
| ,, | ನಂ. ೨ | ೨೯೦-೨೯೫ |
| ,, | ನಂ. ೩ | ೨೮೦-೨೮೫ |
| ಅಪ್ಲಂಡ ಹತ್ತಿ | | ೨೭೫-೨೮೫ |
| ಜಿನ | | ೨೨೦-೨೨೫ |
| ಸಾಜಿನ | | ೨೦೦ |
| ಡಬಲರೋಲ | | ೨೦೫-೨೧೫ |

## ದಕ್ಷಿಣ ಕನ್ನಡ

ಜಿಲ್ಲೆಯ ಹೋಟೆಲ ಕೆಲಸಗಾರ ಬೇಡಿಕೆಗಳ ಸಂಬಂಧದಲ್ಲಿ ಯುವಜನ ಕಾಂಗ್ರೆಸ್ಸಿನ ಅಧ್ಯಕ್ಷತೆಯಲ್ಲಿ ಮಂಗಳೂರು ಮೈದಾನಿನಲ್ಲಿ ಸಭೆಯೊಂದು ತಾ ೧೫ ಕ್ಕೆ ಜರುಗಿತು. ಕಮ್ಯುನಿಸ್ಟ ಸಂಘಟಕರ ಕೈಯಲ್ಲಿ ಸಿಕ್ಕು ದೇಶದ ಬೆನ್ನೆಲುಬಿನಂತಿರುವ ರೈತ—ಕೂಲಿಕಾರರು ತಪ್ಪುದಾರಿ ಹಿಡಿಯುತ್ತಿರುವರೆಂದೂ ಕೂಲಿಕಾರರೆಲ್ಲ ಕಾಂಗ್ರೆಸ್ ಧ್ವಜದಡಿ ಸಂಘಟಿತರಾಗಬೇಕೆಂದೂ ಶ್ರೀ ಎ. ಬಾಲಪ್ಪನವರು ಭಾಷಣ ಮಾಡಿದರು.

ಮಂಗಳೂರಲ್ಲಿ ಪ್ರಭಾತ ಫೇರಿ ಭಾಷಣ ಮೊದಲಾದವುಗಳೊಡನೆ ತಾ. ೨೨ ಕ್ಕೆ ಗಾಂಧಿ ಜಯಂತಿ ಉತ್ಸವ ಪ್ರಾರಂಭವಾಯಿತು.

ಉಡುಪಿಯ ಸಮೀಪ ಮಣಿಪಾಳದಲ್ಲಿರುವ ಎಕೆಡೆಮಿ ಆಫ್ ಜನರಲ್ ಎಜ್ಯುಕೇಶನ್ ಸಂಸ್ಥೆಯ ಹುಟ್ಟುಹಬ್ಬ ತಾ. ೧೬ ರಿಂದ ೧೮ ರ ವರೆಗೆ ಉಡುಪಿಯ ಕ್ರಿಶ್ಚಿಯನ್ ಹಾಯಸ್ಕೂಲ ಹಾಲಿನಲ್ಲಿ ಯಶಸ್ವಿಯಾಗಿ ನೆರವೇರಿತು. ಡಾ. ಮಾಧವ ಪೈ (ರಜಿಸ್ಟ್ರಾರ) ರು ಸಂಸ್ಥೆಯ ಕಾರ್ಯಕಲಾಪಗಳ ವರದಿಯನ್ನೋದಿದರು. ಶ್ರೀ ವೈಕುಂಠ ಬಾಳಿಗಾ, ಕೊಚ್ಚಿಕಾರ ಪದ್ಮನಾಭ ಪೈ, ಡಾ. ಮಲ್ಯ, ಎಂ. ಎಸ್. ಏಕಾಂಬರರಾವ್, ಆರೂರು ಲಕ್ಷ್ಮೀನಾರಾಯಣರಾವ ಮೊದಲಾದ ಜಿಲ್ಲಾ ಪ್ರಮುಖರು ಕಾರ್ಯಕಲಾಪಗಳಲ್ಲಿ ಭಾಗವಹಿಸಿದ್ದರು.

ಒದ್ದೆಯಾಗಿದ್ದ ಸಿಡಿಮದ್ದನ್ನು ಒಣಗಿಸಲು ಒಲೆಯ ಬಳಿ ಇಟ್ಟಿದ್ದಾಗ ಅದು ಒಮ್ಮಿಂದೊಮ್ಮೆ ಸ್ಫೋಟವಾಗಿ ಸುಬ್ರಹ್ಮಣ್ಯದ ಶ್ರೀ ಸುಬ್ರಾಯ ನಾಯಕರೆಂಬ ವ್ಯಾಪಾರಿಗಳ ಕುಟುಂಬದ ಅನೇಕರು ಅದಕ್ಕೆ ಅಹುತಿಯಾದರು. ಶ್ರೀ ನಾಯಕರೊಬ್ಬರು ಬದುಕಿದು ಅವರ ಭಯಂಕರ ಗಾಯಗಳ ಚಿಕಿತ್ಸೆ ನಡೆದಿದೆ.

## ಬಂಗಾಲ ಮಂತ್ರಿಮಂಡಲದಲ್ಲಿ ಅವಿಶ್ವಾಸ

### ಗೊತ್ತುವಳಿ ಬಿದ್ದು ಹೋಯಿತು

ಬಂಗಾಲ ಶಾಸನ ಸಭೆಯಲ್ಲಿಯೂ ಮೇಲ್ಮನೆಯಲ್ಲಿಯೂ ಕಲಕತ್ತೆಯ ಜಾತೀಯ ದುರಂತದ ವಿಷಯದಲ್ಲಿ ಕರ್ತವ್ಯಚ್ಯುತವಾದ ಮಂತ್ರಿಮಂಡಲದ ಮೇಲೆ ಅವಿಶ್ವಾಸ ವ್ಯಕ್ತಗೊಳಿಸುವ ಗೊತ್ತುವಳಿಗಳು ಕಳೆದ ವಾರ ಚರ್ಚಿಸಲ್ಪಟ್ಟು ಸಾಕಷ್ಟು ಬೆಂಬಲವಿಲ್ಲದೆ ಬಿದ್ದು ಹೋದವು. ಮತದಾನ ಕಾಲದಲ್ಲಿ ಯುರೋಪಿಯನ್ನರೂ ಕಮ್ಯುನಿಸ್ಟರೂ ತಟಸ್ಥ ಉಳಿದಿದ್ದರು. ಮುಖ್ಯ ಮಂತ್ರಿ ಸುಹ್ರವರ್ದಿಯವರು ಟೀಕೆಗಳಿಗೆ ಉತ್ತರವಿತ್ತು ಶಾಂತಿರಕ್ಷಣೆಯ ಕೆಲಸ ಮಂತ್ರಿಯದಲ್ಲವೆಂದೂ ಅದು ಪೋಲೀಸರ ಕೆಲಸವೆಂದೂ ಪೋಲೀಸರು ಕರ್ತವ್ಯಚ್ಯುತರಾದುದರಿಂದ ದುರಂತವಾದುದಕ್ಕೆ ತಾವು ಹೊಣೆಯಲ್ಲವೆಂದೂ ಹೊಣೆಯಿಂದ ನುಣಚಿಕೊಂಡರು.

(೧೩ ನೇ ಪುಟ ನೋಡಿರಿ)

## ಜವಾಹರಲಾಲರ ನಿವೃತ್ತಿ

ಪಂಡಿತ ಜವಾಹರಲಾಲರು ಪ್ರಾರಂಭದಲ್ಲಿಯೇ ಹೇಳಿದಂತೆ ತಮ್ಮ ಅಧ್ಯಕ್ಷಸ್ಥಾನದಿಂದ ನಿವೃತ್ತರಾದರು. ಹೊಸ ಅಧ್ಯಕ್ಷರ ಆಯ್ಕೆ ಅಕ್ಟೋಬರ ೨೦ ಕ್ಕೆ ನಡೆಯುವದು. ಕಾಂಗ್ರೆಸ ಅಧ್ಯಕ್ಷ ಪದಕ್ಕೆ ನಾಮಪತ್ರ ಕಳಿಸುವ ಕೊನೆಯ ತಾರೀಕು ಅಕ್ಟೋಬರ ೫ ಮತ್ತು ಚುನಾವಣೆಯ ಪರಿಣಾಮ ಜಾಹೀರ ಮಾಡುವ ತಾರೀಕು ಅಕ್ಟೋಬರ ೨೨ ಎಂದು ಗೊತ್ತಾಯಿತು.

ಭೂ ಪದ್ಧತಿ ಸುಧಾರಣೆಯ ಬಗ್ಗೆ ಕಾಂಗ್ರೆಸ್ಸು ಪ್ರಾಂತೀಯ ಸರಕಾರಗಳ ಸೂಚನೆಗಳನ್ನು ಆಮಂತ್ರಿಸುತ್ತದೆ. ಈ ಸುಧಾರಣೆಗಳು ಬೇಗನೆ ಪ್ರಾರಂಭವಾಗಿ ಮೊಟ್ಟಮೊದಲ ಜಮೀನದಾರಿ ಪದ್ಧತಿ ನಾಶವಾಗಬೇಕೆಂದು ಕಾರ್ಯಸಮಿತಿ ಅಭಿಪ್ರಾಯಪಡುತಿದೆಂಬ ಗೊತ್ತುವಳಿ ಸ್ವೀಕೃತವಾಯಿತು. ನಡುಗಾಲ ಸರಕಾರದ ಧೋರಣೆಯ ಬಗ್ಗೆಯೂ ಕಾರ್ಯಸಮಿತಿ ಚರ್ಚಿಸಿದ ನಂತರ ಅಧಿವೇಶನ ಕೊನೆಗಂಡಿತು.

ಚಿಕ್ಕ ಕತೆ

# ವಸುಂಧರಾ ಜೀವನ

ಬರೆದವ : ಎಸ್. ವೆಂಕಟೇಶ (ಹೈದರಾಬಾದ ದ.)

ಅಂಜುತ್ತ, ಅಂಜುತ್ತ ಮನೋಹರನು ಒಳಗೆ ಪ್ರವೇಶಿಸಿದನು. ಪ್ರಾತಃಕಾಲದಲ್ಲಿ ಗುಲಾಬಿ ಹೂವಿನ ಎಸಳಿನೊಳಗಿಂದ ಮಂಜಿನ ನೀರು ಹನಿಹನಿಯಾಗಿ ಬೀಳುವಂತೆ ಅವನ ನಯನಗಳಿಂದ ಹನಿಗಳು ಗಲ್ಲಗಳ ಮೇಲೆ ಧಾರೆ ಧಾರೆಯಾಗಿ ಹರಿಯ ತೊಡಗಿದವು. Dressing room ದಿಂದ ಹೊರಗೆ ಬರುತ್ತಲಿದ್ದ ಡಾಕ್ಟರರೆದುರಿಗೆ ಹೋಗುತ್ತ ದೈನ್ಯದಿಂದ ಕೇಳಿದನು. "ಡಾಕ್ಟರ ಸಾಹೇಬ, ಸ್ವಲ್ಪ ಔಷಧ ಸಿಗಬಹುದೇ? ಅಮ್ಮನಿಗೆ ವಿಪರೀತ ಕಾಯಿಲೆ..." ಅವನ ಸ್ವರದ ಮರುಕ ಧ್ವನಿ ಪ್ರತಿಯೊಬ್ಬನ ಹೃದಯಕ್ಕೆ ಕಳಕಳಿಯುಂಟುಮಾಡುತ್ತಿದ್ದಿತು. ಅದರಲ್ಲಿಯೂ ಡಾ. ಮಧುಸೂದನನು ಬಡವರ ದೇವರೆಂದೂ ದೀನರ ಭಕ್ತನೆಂದೂ ಹೆಸರುವಾಸಿಯಾಗಿದ್ದನು.

"ಓಹೋ, ಅವಶ್ಯವಾಗಿ ದೊರೆಯುವದು ಮಗು" ಅವನ ಮಧುರವಾದ ಹಾಗೂ ಮೋಹಕವಾದ ಮುಖಲಕ್ಷಣದಿಂದ ಆಕರ್ಷಿತರಾದ ಡಾಕ್ಟರರು ಬಾಲಕನ ಬೆನ್ನಿನ ಮೇಲೆ ಕೈಯಾಡಿಸುತ್ತ ಕುರ್ಚಿಯ ಮೇಲೆ ಕುಳಿತುಕೊಳ್ಳಲು ಹೇಳಿ ಒಳಗೆ ಹೋದರು.

ನಿರೀಕ್ಷಿಸದೆ ಇದ್ದ ಸಹಾಯದಿಂದ ಆನಂದಭರಿತನಾದ ಅವನ ಅಳುಮುಖವು ಮಾಯವಾಯಿತು. ಕೆಲನಿಮಿಷಗಳ ನಂತರ ಡಾಕ್ಟರರು ತಲೆಯ ಮೇಲೆ ಹ್ಯಾಟನ್ನು ಹಾಕಿಕೊಳ್ಳುತ್ತ ಮನೋಹರನ ಬಳಿ ಬಂದು ನುಡಿದರು.

"ಹೂಂ! ಏಳು ಹೊರಡುವ"

"ಎಲ್ಲಿಗೆ?" ಆಶ್ಚರ್ಯದಿಂದ ಏನೂ ತಿಳಿಯದವನಾಗಿ ನೋಡುತ್ತ ನಿಂತುಕೊಂಡ ಮನೋಹರ

"ನಿನ್ನ ಮನೆಗೆ"

"ನನ್ನ......" ಅವನ ವಿಸ್ಮಯವು ಅಧಿಕವಾಗ ತೊಡಗಿತು. ಯಾವ ಮಾತನ್ನೂ ಆಡದೆ ಅವರನ್ನು ಹಿಂಬಾಲಿಸಿದನು. ಬಾಗಿಲ ಬಳಿ ಬಂದ ಕೂಡಲೆ ಲಗುಬಗೆಯಿಂದ ಒಳಗೆ ಹೋಗಿ ಒಂದು ಹರಕು ಚಾಪೆಯನ್ನು ತಂದು ಹಾಸಿದನು. ಅವನ ತಾಯಿಯು ಅಸಹ್ಯ ವೇದನೆಯಿಂದ ನರಳುತ್ತ ಹೊಲಸಾದ ಹಾಸಿಗೆಯ ಮೇಲೆ ಒರಗಿದ್ದಳು. ಹತ್ತಿರವೇ ಒಂದುತಂಬಿಗೆ, ಹರಿದು ಹೋದ ಸೀರೆ ಹಾಗೂ ಕುಪ್ಪಸ ಬಿದ್ದಿದ್ದವು. ಆರೂಮಿನಲ್ಲಾವರಿಸಿದ ದಾರಿದ್ರ್ಯವನ್ನು ಬಚ್ಚಿಡಬೇಕೆಂಬ ಹಂಬಲದಿಂದಲೋ ಏನೋ ಸ್ವಲ್ಪ ಕತ್ತಲೆಯು ಪಸರಿಸಿದ್ದಿತಲ್ಲಿ. ಮನೋಹರನನ್ನು ಕಂಡ ಕೂಡಲೇ ಕ್ಷೀಣಸ್ವರದಲ್ಲಿ ಅವನನ್ನು ಹತ್ತಿರ ಕರೆದು ಅವನ ಕೈಯನ್ನು ಗಟ್ಟಿಯಾಗಿ, ಹಿಡಿದುಕೊಂಡಳಾಮಾತೆ.

"ಅಮ್ಮ ಡಾಕ್ಟರರು ಬಂದಿರುವರು" ಎಂದು ನುಡಿಯುತ್ತ ಕೈಬಿಡಿಸಿಕೊಂಡು ಬಾಗಿಲ ಬಳಿ ಬಂದು ಕೂಡಲೇ ಡಾಕ್ಟರರಿಂದೊಡಗೂಡಿ ಒಳಗೆ ಹೋದನು. ಯುವತಿಯ ಸುಂದರವಾದ ಕಾಯವು ಬಾಡಿದ ಹೂವಿನಂತೆ ಮುದುಡಿಹೋಗಿದ್ದಿತು. ಡಾಕ್ಟರರು ರೋಗಿಯನ್ನು ಪರೀಕ್ಷಿಸುತ್ತ "ಈ ಬಳ್ಳಿಯು ತೀವ್ರವಾಗಿ ಬಾಡುವದು. ಅನಂತರ ಈ ಸುಂದರವಾದ ಹೂವಿನ ಗತಿ......" ಎಂದು ಆಲೋಚಿಸುತ ಮನೋಹರನ ಕಡೆ ದೃಷ್ಟಿ ಚೆಲ್ಲಿದರು. ಅವನ ಮ್ಲಾನವಾದ ಮುಖ ಕಂಡ ಕೂಡಲೇ ಇವರ ಮುಖವೂ ಇಳಿಯಿತು.

"ಎರಡು ಮೂರು ದಿನಗಳೊಳಗಾಗಿಯೇ ಗುಣವಾಗಬಹುದು. ಮನೋಹರನೊಡನೆ ಔಷಧ ಕಳುಹುವೆ." ರೋಗಿಗೆ ಸಮಾಧಾನವಾಗಲೆಂದು ಒಂದೆರಡು ಉಪಚಾರಿಕ ಮಾತುಗಳನ್ನಾಡಿ ಹೊರಡಲನುವಾದರು.

ಇಂತಹ ದೊಡ್ಡ ಹೆಸರು ಪಡೆದ ಡಾಕ್ಟರರು ತಮ್ಮಂತಹ ಅನಾಥರೊಡನೆ ಇಷ್ಟು ಆದರದಿಂದ ವಿಚಾರವಿನಿಮಯ ಮಾಡುವದನ್ನು ಕಂಡು ಆಶ್ಚರ್ಯವಾಯಿತು. ಸಹಾನುಭೂತಿ ಶೂನ್ಯವಾದ ಜಗತ್ತಿಗೆ ಬೇಸರಗೊಂಡ ಆ ಉದಾಸೀನ ಮುಖದ ಮೇಲೆ ಕ್ಷಣಾರ್ಧದಲ್ಲಿ ಕಳೆಯು ಬದಲಾಯಿತು. ಅವಳು ಮಾತನಾಡತೊಡಗಿದಳು.

ಡಾಕ್ಟರ ಆಗರ್ಭಶ್ರೀಮಂತರಾದ ತಾವು ಬಡವಿಯ ಗುಡಸಲಿಗೆ ಬಂದಿರಿ. ಈ ಉಪಕಾರವನ್ನು ಹೇಗೆ ತೀರಿಸಲಿ? ಡಾ. ಸ್ವಂತದ ಸಲುವಾಗಿಯಲ್ಲದಿದ್ದರೂ ಈ ಅನಾಥ ಬಾಲಕನ ಸಲುವಾಗಿಯಾದರೂ ಸ್ವಲ್ಪ ದಿವಸ ಜೀವಂತದಿಂದಿರಬಹುದೇ? ನಮ್ಮಂತಹ ಅಭಾಗ್ಯರ ಉದರದಲ್ಲಿ ಇಂತಹ ಅಮೌಲ್ಯವಾದ ರತ್ನವನ್ನು ದೇವರು ಏಕೆ ಹಾಕುವನು? ಆ ರತ್ನವನ್ನು ಸುರಕ್ಷಿತವಾಗಿ ಕಾಪಾಡಿಕೊಳ್ಳುವ ಸಾಮರ್ಥ್ಯ ಕೂಡ ಇರುವದಿಲ್ಲ ನಮ್ಮಲ್ಲಿ" ಮನೋಹರನ ಕಡೆ ನೋಡಿದ ಕೂಡಲೇ ಅವಳ ನೇತ್ರಗಳು ಕಂಬನಿಯಿಂದ ತುಂಬಿ ತುಳಕಾಡತೊಡಗಿತು ಆ ತಾಯಿ ಮಕ್ಕಳೀರ್ವರ ದುರವಸ್ಥೆಯನ್ನು ಕಂಡು ಡಾಕ್ಟರರಿಗೆ ಕೆಡುಕೆನಿಸಿತು. ಕಾರಣ ಎಂದೂ ಘಟಿಸದೆ ಇದ್ದ ಕೃತಿಯು ಇಂದು ಘಟಿಸತೊಡಗಿತು. ಅತ್ಯಾದರದಿಂದ ಮನೋಹರನು ಇತ್ತ ಚಹವನ್ನು ಕುಡಿದು ಕುತೂಹಲದಿಂದ ಕೇಳತೊಡಗಿದರು.

ಆ ಯುವತಿ ಮತ್ತೆ ಮಾತಿಗಾರಂಭಿಸಿದಳು, ಅವರ ಅಭಿಲಾಷೆಯು ತನಗೆ ದೊರೆಯದೆ ಇದ್ದ ಸುಸಂಧಿ ಈ ಹುಡುಗನಿಗೆ ಲಭಿಸಲೆಂದು ಇದ್ದಿತು. ಹೆಚ್ಚಿನ ದುಡಿತದಿಂದ ತಮ್ಮ ಬುದ್ಧಿ ಚಾತುರ್ಯವನ್ನು ಪ್ರದರ್ಶಿಸಲು ಅಸಾಧ್ಯವಾಯಿತು; ಆದರೆ ತಮ್ಮ ಎಲಬುಗಳು ಮುರಿದರೂ ಚಿಂತೆಯಿಲ್ಲ, ಮನೋಹರನಿಗೆ ವಿದ್ಯೆ ಕಲಿಸಬೇಕು; ಕಾರಕೂನನ ಮಗ ಒಬ್ಬ ದೊಡ್ಡ ಸಾಹೇಬನಾಗಬೇಕು—ಎಷ್ಟು ವಿಶಾಲವಾದ ಆಕಾಂಕ್ಷೆ ಇದ್ದಿತು! ಆದರೆ ದುರ್ದೈವ ಅಷ್ಟಾದರೂ ಕಣ್ತುಂಬ ಕಾಣಲು ಎಲ್ಲಿಂದ ಬರಬೇಕು?

ಚಿಕ್ಕಂದಿನಲ್ಲಿ ಒಂದು ಮನೆಯಲ್ಲಿ ಪೂಜೆ ಮಾಡಿ ವಿದ್ಯೆಕಲಿಯುತ್ತಿದ್ದರು. ಮ್ಯಾಟ್ರಿಕ್ ಪಾಸಾದ ನಂತರ ಒಡೆಯನು ಅವಮಾನ ಮಾಡಲು ಕಾಲೇಜ ವಿದ್ಯಾಭ್ಯಾಸ ಮಾಡಲು ತೊಂದರೆಯುಂಟಾಯಿತು. ಅಂತೆಯೇ ಆ ಮನೆಯಿಂದ ಹೊರಬಿದ್ದರು. ಟಿವಿಶನ್ನು ಹೇಳಿಕೊಂಡು ಕಾಲೇಜದಲ್ಲಿ ಹೇಗಾದರೂ ಪ್ರಯತ್ನ ಬಟ್ಟು ಹೆಸರು ಹಚ್ಚಿಸಿದರು. ದರಿದ್ರನಿದ್ದರೂ ಅವನ ದೇಹಕ್ಕೆ ವಿಶ್ರಾಂತಿಯ ಅವಶ್ಯಕತೆ ಇರುತ್ತದೆ. ಪ್ರಕೃತಿ ದಿನಂಪ್ರತಿ ಕೆಡುತ್ತ ಬಂದುದರಿಂದ ಕಾಲೇಜಿಗೆ ಶರಣು ಹೊಡೆದು ಗುಲಾಮಗಿರಿಯ ನೌಕರಿಗೆ ಶರಣು ಹೋದರು. ನನ್ನೊಡನೆ ಲಗ್ನವಾದಂದಿನಿಂದ ಅವರು ಅತಿಶಯವಾಗಿ ಆನಂದದಲ್ಲಿಯೇ ಲೋಲುಪರಾಗಿರುತ್ತಿದ್ದರು. ಆದರೆ ಅರ್ಧಕ್ಕೆ ನಿಲ್ಲಿಸಿದ ಅವರ ಕಾಲೇಜ ಶಿಕ್ಷಣದ ದಾರುಣವಾದ ವೇದನೆ ಏಕಾಂತದಲ್ಲಿಯೇ ಅವರನ್ನು ಕ್ಷೀಣ ಮಾಡತೊಡಗಿತು. ನನಗೆ ಅದರ ಸುಳಿವು ಕೂಡ ಹತ್ತದಂತೆ ಪ್ರಯತ್ನಿಸುತ್ತಿದ್ದರವರು.

"ದಿನಗಳೆದಂತೆ ಮನೋಹರನ ಬುದ್ಧಿವೈಖರಿಯ ಪ್ರಭಾವದಿಂದ ಕಳೆದುಕೊಂಡ ಸುಖ ದೊರೆತಂತೆ ಆನಂದದ ಚಿಹ್ನೆಯು ಅವರ ಮುಖದ ಮೇಲೆ ಸ್ಪಷ್ಟವಾಗಿ ಗೋಚರಿಸತೊಡಗಿತು. ಮುಂಬರುವ ಭಾಗ್ಯದ ಆಶೆಯಿಂದ ಹಿಂದಿನ ದಿನಗಳನ್ನು ಮೆಲ್ಲಮೆಲ್ಲನೆ ಮರೆಯತೊಡಗಿದರು. ತರುವಾಯ ತಮಾಷೆಗೆಂದು ಬಾಲಜೀವನದಲ್ಲಿಯ— ಅಪಮಾನದ — ಅಪ್ರೀಪ್ಸರ ವಿಚಾರವಾಗಿ ಬಹಳ ರಸಮಯವಾಗಿ ಹೇಳತೊಡಗಿದರು. ಬಿಡ್ಡದ ಲಾಯಿಯಂತಿರುವ ರಾವಬಹಾದ್ದೂರ ಶ್ರೀನಿವಾಸರಾಯರ ಉದ್ಧಟತನ, ಅವರ ಅಹಂಕಾರದ ದರ್ಪ ಇದರ ಉಲ್ಲೇಖನ ಮಾಡುತ್ತಲೇ ಅವರ ಮುಖದ ಮೇಲೆ ತಿರಸ್ಕಾರದ ಚಿಹ್ನೆಯು ಒಡಮೂಡುತ್ತಿದ್ದಿತು. ಹಾಗೂ ಕೂಡಲೇ ಅವರ ಮಗನ ನೆನಪಾಗಿ ತಮ್ಮ ಒಲುಮೆಯ ಮಿತ್ರನ ಔದಾರ್ಯದಿಂದ ಅವರ ಕೋಪವು ಅಡಗುತ್ತಿದ್ದಿತು. ಮನೆ ಬಿಡುವ ವೇಳೆಯಲ್ಲಿ ಒಬ್ಬರಿಗೊಬ್ಬರು ತಬ್ಬಿಕೊಂಡು ಉಪಾಯವಿಲ್ಲದೆ ಬೇರಾದರಂತೆ—

"ಇತ್ತೀಚೆಗಂತೂ ಬಹಳ ಕೆಲಸದ ಮೂಲಕ ಮಾತನಾಡಲೂ ವೇಳೆ ದೊರೆಯುತ್ತಿರಲಿಲ್ಲ. ಹಗಲಿರಳೂ ಕಚೇರಿಯ ಕೆಲಸವಲ್ಲದೆ ಬೇರೆ ಇನ್ನಿತರ ಕೆಲಸಗಳಿಂದ ತಿಂಗಳಿಗೆ ಐವತ್ತು ರೂಪಾಯಿ ಗಳಿಸತೊಡಗಿದರು. ಒಬ್ಬನೇ ಒಬ್ಬ ಮಗ, ಶಾಲೆಯಲ್ಲಿ ಸ್ಕಾಲರಶಿಪ್ (ವಿದ್ಯಾರ್ಥಿ ವೇತನ) ಹೊರಗೆ ಬುದ್ಧಿವಂತ ಮನೆಯಲ್ಲಿ ಆಜ್ಞಾಪರಿಪಾಲಕ—ಈ ಮಾಣಿಕವನ್ನು ಎಲ್ಲಿಡಲಿ, ಎಲ್ಲಿಡದಿರಲಿ, ಹೀಗಾಗಿದ್ದಿತು ಅವರ ಸ್ಥಿತಿ. ಆದರೆ ದುಡಿತದ ಫಲದಿಂದ ತಮ್ಮ ಕೋಮಲವಾದ ಪ್ರಕೃತಿಗೆ ಆಗುತ್ತಿರುವ ಕಷ್ಟವನ್ನು ಅವರು ಲಕ್ಷಿಸಲಿಲ್ಲ. ಹೀಗಾಗಿ ಕೆಲದಿನಗಳನಂತರ ಸಾವಧಾನವಾಗಿ ಜ್ವರ ಬರತೊಡಗಿತು. ಕೆಲದಿನಗಳಲ್ಲಿಯೇ ಕ್ಷಯರೋಗವೆಂದು ಡಾಕ್ಟರರಿಂದ ನಿರ್ಣಯಿಸಲ್ಪಟ್ಟಿತು. ಹಾ, ಹಾ, ಅನ್ನುವದರೊಳಗಾಗಿಯೇ ಯಮನ ಪಾಶದಿಂದ ತಪ್ಪಿಸಿಕೊಳ್ಳಲು ಅಸಾಧ್ಯವಾಗಿ ಮೃತ್ಯುಲೋಕದ ಹಾದಿಹಿಡಿದರು. ಪರಿಶ್ರಮಪಟ್ಟು ಎಂತಹ ಒಳ್ಳೇ ಔಷಧ ಕೊಟ್ಟರೂ ಗುಣವಾಗಲಿಲ್ಲ. ಅದರಲ್ಲಿಯೂ ಮಾನಸಿಕ ಅವಸ್ಥೆಯಿಂದಂತೂ ಅವರು ಬಹಳ ಸೊರಗಿದ್ದರು. ಮೃತ್ಯುವಿನ ಮಾಯಾಪಾಶವು ಬಹಳ ತೀವ್ರವಾಗಿ ಅವರ ಕುತ್ತಿಗೆಯಲ್ಲಿ ಬಿದ್ದಿತು. ಒಂದು ದಿನ ಮನೋಹರನು ಮನೆಯಲ್ಲಿಲ್ಲದ ವೇಳೆಯಲ್ಲಿ ನನ್ನನ್ನು ಹತ್ತಿರ ಕರೆದು ಹೇಳಿದರು.

"ಇದು ನೋಡು ಸರೋಜ ನಿನ್ನ ಕಣ್ಣಲ್ಲಿ ನೀರನ್ನು ಕಂಡು ನನ್ನ ಜೀವ ಹೇಗೇಗೋ ಆಗುತ್ತಲಿದೆ. ಅದನ್ನು ಒರೆಸಿಹಾಕು. ನೀನು ಸುಶಿಕ್ಷಿತಳೂ ಜಾಣೆಯೂ ಆಗಿರುವೆ. ಜಗತ್ತಿನಲ್ಲಿ ನನ್ನ ಆಕಾಂಕ್ಷೆಯು ಅಸಫಲವಾದುದರ ಅರಿವು ನಿನಗೆ ಉಂಟು. ಪ್ರೇಮದಿಂದ ಕರ್ತವ್ಯದ ಮಹತ್ವ ನಿನಗೆ ತಿಳಿದಿದೆ. ನಾನಂತೂ ಪರಲೋಕಯಾತ್ರೆಗೆ ತೆರಳುವವನಿದ್ದೇನೆ. ಪ್ರಯಾಣಕ್ಕೆ ತುಸು ಅವಕಾಶವುಂಟು ಪತಿ ಹಾಗು ತಂದೆ ಈ ದೃಷ್ಟಿಯಿಂದ ನಿನ್ನ ಹಾಗೂ ಮನೋಹರನ ಸಲುವಾಗಿ ಯಾವ ವ್ಯವಸ್ಥೆಯನ್ನೂ ಮಾಡದೇ ಹೋದೆ. ನನ್ನದೊಂದೇ ಒಂದು ಆಶೆ ಇದೆ ಸರು. ಹೇಗಾದರೂ ಮಾಡಿ ನೀನು ಮನೋಹರನನ್ನು ಓದಿಸುವಿಯಲ್ಲವೇ? ಈ ಸಸಿಯನ್ನು ಒಂದು ಸುಂದರವಾದ ವೃಕ್ಷವನ್ನಾಗಿ ಬೆಳೆಯಿಸುವೆಯಾ? ಆದರೆ ನೀನು ಕೂಡ ಅಬಲೆಯೇ. ಸಮಾಜದಲ್ಲಿ ಎಲ್ಲಿಂದ ದೊರೆಯುವದು ನಿನಗೆ ಹಣದ ಸಹಾಯ? ಆದರೆ……ತಡೆ' ಒಮ್ಮಿಂದೊಮ್ಮೆ ಅವರ ಮುಖವು ಪ್ರಫುಲ್ಲಿತವಾಯಿತು. 'ಸರೋಜ ನನ್ನ ಬಾಲಮಿತ್ರ ಲಕ್ಷಾಧೀಶನಾಗಿದ್ದಾನೆ. ಇಂದು ಅವನು ಇಲ್ಲಿಯೇ ಹೈದರಾಬಾದಿನಲ್ಲಿರುವನಂತೆ ಭೆಟ್ಟಿಯಾಗುವ ಹಂಬಲವೇನೋ ಇದ್ದಿತು. ಆದರೆ ಈ ನನ್ನ ದುರ್ದಶೆಯನ್ನು ಕಂಡು ಮರಗುವನೆಂಬ ಭಯದಿಂದ ನಾನು ಬೇಕಂತಲೇ ಅವನ ಭೆಟ್ಟಿಯಾಗಲಿಲ್ಲ. ಆದರೆ ನೀನು ಮಾತ್ರ ಅವಶ್ಯಬಿದ್ದ ವೇಳೆಯಲ್ಲಿ ಅವನನ್ನು ಭೆಟ್ಟಿಯಾಗು. ದ್ವಾರಕೆಯ ಒಡೆಯನಾದ ಶ್ರೀ ಕೃಷ್ಣನು ತನ್ನ ಬಡ ಮಿತ್ರ ಸುದಾಮನನ್ನು ಮರೆತಿರಲಿಲ್ಲ. ನನ್ನ ಮಧುಸೂಧನನೂ ನನ್ನನ್ನು ಎಂದೂ ಮರೆಯಲಾರ. ಅವನ ಮನೆಯಿಂದ ಹೊರಬೀಳುವ ವೇಳೆಯಲ್ಲಿ ಅವನು ನನ್ನ ಮುಂದೆ ವಚನವನ್ನಿತ್ತಿದ್ದನು— ಪ್ರಭಾಕರ, ಇಂದಿಲ್ಲ ನಾಳೆ ತಂದೆಯ ಕೈದ್ಯಿಂದ ಬಂಧಮುಕ್ತನಾದ ಕೂಡಲೇ ನಿನ್ನನ್ನು ನಾನು ತಮ್ಮನಂತೆ ಭಾವಿಸಿ ಬೇಕಾದ ಸಹಾಯ ಮಾಡಬಲ್ಲೆ. ನಾನು ಮರೆಯುವದಿಲ್ಲ. ನಿನ್ನನ್ನು ಸರೋಜ, ಇಂದಿಗೂ ಅವನ ಅಶ್ರುಭರಿತವಾದ ನೇತ್ರಗಳು ನೆನಪಿಗೆ ಬರುತ್ತಲಿದೆ" ಡಾಕ್ಟರರು ತಮ್ಮ ಹೆಸರು ಕೇಳಿದ ಕೂಡಲೆ ಬೆಚ್ಚಿಬಿದ್ದರು. ಅವರು ಕೂಡಲೇ ಬೇರೆ ಕಡೆಗೆ ತಮ್ಮ ದೃಷ್ಟಿಯನ್ನು ಚಲ್ಲಿದರು. ಆ ಸ್ತ್ರೀಯೂ ದಣಿದಿದ್ದರೂ ಮಾತನಾಡತೊಡಗಿದಳು. ಡಾಕ್ಟರ ಇಂತಹ ಕಷ್ಟ ದಿನಗಳಲ್ಲಿ ಯಾರೂ ಯಾರಿಗೆ ಕೇಳರು. ನಾನಂತೂ [illegible] ದಾರಿಯನ್ನೇ ಹಿಡಿದಿರುವೆ. ಇಂದಿನಿಂದಲೇ ಮನೋಹರನೊಬ್ಬನನ್ನೇ ಬಿಟ್ಟು ಹೊರಟಿರುವೆ. ಮುಂದೆ ಅವಳಿಗೆ ಮಾತನಾಡಲು ಬರಲಿಲ್ಲ. ಹೃದಯದ ಕಳಕಳಿಯಿಂದ ಹೊರಬೀಳುವ ಮಾತೆಯ ಮರುಕ ಮಾತುಗಳು ಅಲ್ಲಿಯೇ ಕಡೆದವು.

ನಿರುಪಾಯರಾಗಿ ಡಾಕ್ಟರರು ಅತಿ ಪ್ರಯಾಸದಿಂದ ರೋಗಿಗೆ ಒಂದು ಇಂಜೆಕ್ಶನ್ ಕೊಟ್ಟು ಹೊರಬಿದ್ದ ವೇಳೆಯಲ್ಲಿ ಅವರ ಮುಖವು ಅಪರಾಧಿಯ ಮುಖದಂತೆ ಕಂಡುಬರುತ್ತಲಿದ್ದಿತು. ಬೀಳ್ಕೊಡಲುಬಂದ ಮನೋಹರನನ್ನು ಅವರು ಕೇಳಿದರು.

"ಮಗು ನಿನ್ನ ಪೂರ್ಣ ಹೆಸರೇನು?"

'ಮನೋಹರ ಪ್ರಭಾಕರ ಕುಲಕರ್ಣಿ' ಎಂದು ಹೇಳುತ್ತ ಮಧುಸೂಧನನ ಬೀಳ್ಕೊಟ್ಟು ಒಳಗೆ ಹೋದನು. ಮನೋಹರ ಕಣ್ಣೊರಸಿಕೊಳ್ಳುತ್ತ.

"ಪ್ರಭಾಕರ ಕುಲಕರ್ಣಿಯ ಮಗನಿವನು" ಆಶ್ಚರ್ಯದ ಉದ್ಗಾರ ಹೊರಹೊಮ್ಮಿತು. ಡಾಕ್ಟರರ ಕಣ್ಣ ಮುಂದೆ ಕತ್ತಲೆ ಪಸರಿಸಿತು. ಉಪಾಯಗಾಣದೆ ಮನೆಹಾದಿ ಹಿಡಿದರು.

* * *

ಡಾಕ್ಟರರು ಅಂಗಳದಲ್ಲಿ ಕಾಲಿಟ್ಟ ಕೂಡಲೆ ನಿತ್ಯದ ದೃಶ್ಯ ಅವರ ಕಣ್ಣೆದುರಿಗೆ ಗೋಚರವಾಯಿತು. ವಸುಂಧರೆ— ಮಧುಸೂಧನನ ಮಡದಿ— ಬಾಡಿದ ಒಂದು ಮಲ್ಲಿಗೆಯ ಬಳ್ಳಿಗೆ ನೀರು ಹಾಕಿ ಕೋಮಲವಾಣಿಯಿಂದ, ಕರುಣಾಜನಕವಾದ ದೃಷ್ಟಿ ಬೀರುತ್ತ ತದೇಕಚಿತ್ತಳಾಗಿ ಬಳ್ಳಿಯ ಕಡೆಗೆ ನೋಡುತ್ತ ನಿಂತಿದ್ದಳು. ಎಂದಿನಂತೆ ಅವಳ ಸ್ವಾಗತಭಾಷಣ ಪ್ರಾರಂಭವಾಗಿತ್ತು—

"ದೇವ ಹೊಟ್ಟೆಯಲ್ಲಿ ಒಂದು ಮಗು ಕೂಡ ಇಲ್ಲ; ಆದರೆ ನನ್ನ ಕೈಯಿಂದ ಹಚ್ಚಿದ ಗಿಡಕ್ಕೂ ಸಹ ಹೂವುಗಳಾದರೂ ಬಿಡಬಾರದೇ?"

ಡಾಕ್ಟರರ ಲಕ್ಷ ಅತ್ತ ಕಡೆ ಹರಿಯಲಿಲ್ಲ. ಅವರು ಹಾಗೆಯೇ ಮೇಲುಪ್ಪರಿಗೆಯ ಮೇಲೆ ಹೋಗಿ ಹಾಸಿಗೆಯ ಮೇಲೆ ಒರಗಿದರು. ಅವರ ಕಣ್ಣಿಂದ ದುಃಖದ ಬಿಂದು ಒಂದೇಸಮನೆ ಪಟಪಟನೆ ಹರಿಯತೊಡಗಿತು. 'ಪ್ರಭಾಕರ ಕುಲಕರ್ಣಿ' ಎಂಬ ಉದ್ದಮದುಳಿಗೆ ಸುತ್ತಿಗೆಯಿಂದ ಹೊಡೆದ ಧ್ವನಿ ಅವರ ಕಿವಿಗಳಲ್ಲಿ ಕೇಳಿಸತೊಡಗಿತು. ಚಿಕ್ಕ ಬಾಲಕನಾದ ಮನೋಹರನನ್ನು ನೋಡಿದ ಕೂಡಲೇ ಅವನ ವಿಷಯವಾಗಿ ಹುಟ್ಟಿದ ಆದರದ ಕಾರಣ ಅವರಿಗೀಗ ಹೊಳೆಯಿತು. ಪ್ರಭಾಕರ ಹಾಗೂ ಮನೋಹರನ ಮುಖಚರ್ಯೆಯು ಒಂದೇ ತೆರನಾಗಿದೆ. ಇರ್ವರೂ ಅಷ್ಟೇ ಚತುರರು, ಅಷ್ಟೇ ತೇಜಸ್ವಿಗಳು, ದಾಯಿಬಡಕರು. ಇಪ್ಪತ್ತೈದು ವರುಷಗಳ ಹಿಂದೆ ಅಪಮಾನದ ಕಳೆಯಿಂದೊಡಗೂಡಿದವನಾಗಿ ಪ್ರಭಾಕರನು ಮನೆಹೊರಗಾದನು. ಮತ್ತೆ ಅವನು ವಿದ್ಯಾಧರನಾಗಿ ದರುಶನವೀಯುವನೆಂಬ ಪ್ರಬಲವಾದ ಬಯಕೆ ಅವನಿಗಿತ್ತು ಆದರೆ ಪ್ರಭಾಕರನು ತನ್ನ ಆಶೆಯನ್ನು ಈಡೇರಿಸಿಕೊಳ್ಳದೆ ದೇಹತ್ಯಾಗಿಯಾದುದನ್ನು ಕಂಡು ಚಿಕ್ಕ ಬಾಲಕನಂತೆ ಅವನು ಬಿಕ್ಕಿಬಿಕ್ಕಿ ಅಳತೊಡಗಿದನು.

ಮರುದಿವಸ ವಸುಂಧರೆ ಚಹವನ್ನು ತೆಗೆದುಕೊಂಡು ಮೇಲುಪ್ಪರಿಗೆಗೆ ಬಂದಳು. ನಿನ್ನೆಯಿಂದ ತನ್ನ ಗಂಡನು ಯಾವದೋ ದುಃಖದಲ್ಲಿ ಮುಳಗಿರುವುದನ್ನು ಕಂಡು "ನೀವು ಹೀಗೇಕೆ ಮಾಡುವಿರಿ. ನಿನ್ನೆಯಿಂದ ಮಾತಿಲ್ಲ, ಕತೆಯಿಲ್ಲ ಯಾವದೋ ವಿಚಾರದಲ್ಲಿರುವಂತೆ ತೋರುತ್ತದೆ. ಅದರ ಕಾರಣವೇನು?" ಸ್ವಲ್ಪ ಕೋಪದಿಂದಲೇ ವಸುಂಧರೆ ನುಡಿದಳು.

"ವಸು ಹೀಗೇಕೆ ಹುಚ್ಚಿಯಂತೆ ಬಡಬಡಿಸುವಿ?" ಅವಳನ್ನು ಹಾಸಿಗೆಯ ಮೇಲೆ ಕುಳ್ಳಿರಿಸುತ್ತ "ವಸು, ಹಿಂದೆ ನಮ್ಮ ಮನೆಯಲ್ಲಿ ಪೂಜೆ ಮಾಡಿ ಓದಿಕೊಂಡು ಮ್ಯಾಟ್ರಿಕ್ ವರ್ಗದಲ್ಲಿ ಮೊದಲನೆಯ ನಂಬರು ಪಡೆದ ಪ್ರಭಾಕರ ಹೆಸರು ನೆನಪಿದೆಯೇ ನಿನಗೆ?"

—೧೬ನೇ ಪುಟಕ್ಕೆ

# ಭವಿಷ್ಯ

ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

## ಸಪ್ಟಂಬರ ೩೦ ರಿಂದ ೬ ರ ವರೆಗೆ

### ಮೇಷ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಉತ್ತಮ ಆದರೆ ಮಕ್ಕಳಿಗೆ ಸ್ವಲ್ಪ ಕಾಯಿಲೆ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಮಾನ್ಯವಾಗಿ ಅನುಕೂಲ. ಆಸ್ತಿಯಲ್ಲಿ ಸ್ವಲ್ಪ ಅನುಕೂಲ ಸಾಹಸಗಳು ಮತ್ತು ರೋಖದಲ್ಲಿಯೂ ಸ್ವಲ್ಪ ಹೆಚ್ಚಳ. ದೇವಧರ್ಮದ ಬಗ್ಗೆ ಕುಚೇಷ್ಟೆ ಇಲ್ಲವೆ ಅಶ್ರದ್ಧೆಯ ಮಾತುಕತೆ. ಉದ್ಯೋಗದಲ್ಲಿ ಉತ್ತಮ ಪ್ರಗತಿ ವಿಶೇಷ ಪ್ರತಿಷ್ಠೆ ಆದರೆ ಬಹಳ ಲಾಭ ದೊರೆತರೂ ಬಹಳ ದಿನಗಳ ವಾಯದೆಯ ಮೇಲೆ ಕೊಡುವ ನಿರ್ಧಾರ ಮಾಡಬೇಕಾಗುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳದೇ ಜೋರು ಹೆಚ್ಚು ಆದರೆ ಕೊನೆಯಲ್ಲಿ ಯಶಸ್ಸು ನಿಮಗೆ ಕಾಮವಾಸನೆ ತೀವ್ರ. ಮಿತ್ರತ್ವದಲ್ಲಿ ವಿರೋಧ. ಕೊಟ್ಟ ಮಾತುಗಳ ಮೋಹ. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ೧ನೇ ಚರಣಕ್ಕೆ ಬಹಳ ತೊಂದರೆ. ತಾ. ೨, ೩, ೪, ೫ ಅನುಕೂಲ.

### ವೃಷಭ

ನಿಮ್ಮ ಮತ್ತು ಹೆಂಡತಿಯ ಆರೋಗ್ಯ ಚೆನ್ನಾಗಿಲ್ಲದಿದ್ದರೂ ಕೌಟುಂಬಿಕ ಸುಖ ಸಮಾಧಾನ ಬೆಳಸುವಂಥ ಬಹಳ ಸಂಗತಿ ಸಂಭವಿಸಿ ಪ್ರಿಯ ವಸ್ತುಗಳು ಸ್ವಲ್ಪ ವೆಚ್ಚದಲ್ಲಿಯೆ ಸಂಗ್ರಹ ಮಾಡುವ ಯೋಗ. ಉದ್ಯೋಗದಲ್ಲಿ ಉತ್ತಮ ಪ್ರಗತಿ ಆದರೆ ಪ್ರತಿಷ್ಠೆಯ ಮೇಲೆ ಬಹಳ ವಿಘ್ನ ಬಂದು ಲಾಭ ಬಹಳ ಕಡಮೆ ಬರುವದು. ಮಿತ್ರತ್ವದಲ್ಲಿ ಸ್ವಲ್ಪ ವಿರೋಧ. ಎಲ್ಲರ ಮೇಲೆ ಚಾತುರ್ಯದಿಂದ ದೊಡ್ಡ ಛಾಪು. ಆದರೆ ಶತ್ರುಗಳ ಕಪಟಾಚರಣೆಯಿಂದ ಪರಾಜಯ ಹೊಂದಬೇಕಾಗುವದು. ಅವಚಿತ ಲಾಭಕ್ಕಾಗಿ ಮಾಡಿದ ಸಾಹಸ ಸಾಧಿಸದೆ ತಿರುಗಿ ಅದರ ವೆಚ್ಚ ಮಾತ್ರವೇ ಮೇಲೆ ಬೀಳುವ ಅಂಜಿಕೆ. ಪ್ರವಾಸ ಮತ್ತು ಪತ್ರವ್ಯವಹಾರ ಉತ್ತಮ ಆದರೆ ಭೆಟ್ಟಿ ತೊಂದರೆಯದು. ರೋಹಿಣಿಯ ಕೊನೆಯ ೩ ಮತ್ತು ಮೃಗಾದ ೧ನೇ ಚರಣಕ್ಕೆ ತೊಂದರೆ ಕಡಮೆ. ತಾ. ೧, ೪, ೬ ಅನುಕೂಲ.

### ಮಿಥುನ

ಪ್ರಕೃತಿ ಎಲ್ಲರದೂ ಅನುಕೂಲ. ಆದರೆ ನಿಮ್ಮ ನಿಮ್ಮೊಳಗೆ ಕಲಹ ಮತ್ತು ಬೇಜವಾಬದಾರತನದಿಂದ ವರ್ತಿಸುವಲ್ಲಿ ಒಬ್ಬರೊಬ್ಬರಲ್ಲಿ ಅಹಮಹಮಿಕೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆಗಾಗಿ ಅಪ್ರಿಯ ಜನರ ಮರ್ಜಿ ಹಿಡಿಯುವ ಪ್ರಸಂಗ. ಆದರೆ ಲಾಭ ನೆಟ್ಟಗೆ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಜೊಟ್ಟ ಆಟ ನಡೆಸುವ ಸ್ಪರ್ಧೆಯು ನಡೆದಂತೆ ತೋರುವದು ಆದರೆ ಯಶಾಪಯಶಸ್ಸು ಅನಿರ್ಣೀತ. ಮಿತ್ರ ಸುಖ ಅನುಕೂಲ ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಹೆಚ್ಚು ಅನುಕೂಲ. ಆರಿದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ೧ನೇ ಚರಣಕ್ಕೆ ತೊಂದರೆ ಕಡಮೆ. ತಾ. ೨, ೩, ೪ ಅನುಕೂಲ.

### ಕರ್ಕ

ಪ್ರಕೃತಿ ಸುಧಾರಣವೆ. ಎಲ್ಲದರಲ್ಲಿಯೂ ಹೆಂಡತಿಯು ಮನಸಿಗೆಬಂದಂತೆ ಆಗ್ರಹ ಹಿಡಿಯುವಳು. ಇಲ್ಲವೆ ಅವಳ ಮತಕ್ಕೆ ಮಹತ್ವ ಕೊಡುತ ನಡೆಯುವದರಿಂದ ಜನರಲ್ಲಿ ನಗೆಯಾಟ. ಮತ್ತು ಕುಟುಂಬದಲ್ಲಿಯು ಇತರರಲ್ಲಿ ಗುಸಗುಸಿ. ಮಕ್ಕಳು ಕೆಲ ದುಃಲೌಕಿಕ ಕೃತ್ಯ ಮಾಡುವರು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಇವುಗಳ ಜಮಾ ಮತ್ತು ಖರ್ಚು ಅಷ್ಟೇ ಪ್ರಮಾಣದಲ್ಲಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ ಆದರೆ ನಿಮ್ಮ ಸಹಾಯಕರೇ ಆಯತ ಹೊತ್ತಿಗೆ ಅಡ್ಡಿ ಮಾಡುವ ಕೃತಘ್ನತೆ. ಮಿತ್ರತ್ವದಲ್ಲಿ ಸ್ವಲ್ಪ ವಿರೋಧ. ಶುಭ ಕೃತ್ಯಗಳಲ್ಲಿ ವೆಚ್ಚ ಮಾಡಿದರೂ ಅದರಲ್ಲಿ ನಿಜ ಸಮಾಧಾನದ ಅಭಾವವಿದ್ದು ಅಕಲ್ಪಿತ ಅಡಚಣಿಗಳು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಸ್ವಲ್ಪ ಅನುಕೂಲ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷಾದ ಮೊದಲನೆ ೩ ಚರಣಗಳಿಗೆ ತೊಂದರೆ ಹೆಚ್ಚು. ತಾ. ೩೦, ೫, ೬ ಅನುಕೂಲ.

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಪುರೋಹಿತರವರಿಂದ ಮುದ್ರಿಸಿ ಪ್ರಕಟಿತವಾಯಿತು.

### ಸಿಂಹ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಆದರೆ ಹೆಂಡತಿಯಿಂದ ಬಹಳ ಮಾತಿನ ಬಗ್ಗೆ ಆಗ್ರಹ ಬಂಧುವರ್ಗದಲ್ಲಿ ಉನ್ನತಿ ಪ್ರಿಯ ಜನರ ಸಹವಾಸ. ಆದರೆ ಅದರಲ್ಲಿ ವಿರಸವಾಗುವಂತೆ ಯಾವುದೊಂದು ಅಪರಿಹಾರ್ಯ ಅಡಚಣಿ ಅಡ್ಡ ಬರುವ ಸಂಭವ. ನೆರೆಯವರು ನಿಂದೆಯ ಮಾತುಗಳನ್ನಾಡುವರು ಉದ್ಯೋಗದಲ್ಲಿ ಪ್ರತಿಷ್ಠೆ ಕಡಮೆ. ಆದರೆ ಪ್ರಗತಿ ಮತ್ತು ಲಾಭ ಉತ್ತಮ. ವೆಚ್ಚವೂ ಭಾರದ್ದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳದೇ ಜೋರು ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಮಘಾದ ಕೊನೆಯ ೩ ಮತ್ತು ಪೂರ್ವಾದ ಮೊದಲನೇ ಚರಣಕ್ಕೆ ಹೆಚ್ಚು ತೊಂದರೆ. ತಾ. ೨—೩—೪ ಅನುಕೂಲ.

### ಕನ್ಯಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಹೆಂಡತಿಗೆ ಮಾತ್ರ ಸ್ವಲ್ಪ ತೊಂದರೆ ಪ್ರಿಯ ಮತ್ತು ಅಪ್ರಿಯ ಅತಿಥಿಗಳ ಬರಹೋಗುವದ ಒಂದೇ ಕಾಲಕ್ಕೆ ಸಂಭವಿಸುವದು. ಮಕ್ಕಳಲ್ಲಿ ಬಹು ಉನ್ನತಿ. ಸ್ಥಾವರ ಜಂಗಮದಲ್ಲಿ ಹೆಚ್ಚಳ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಬಹಳ ಆದರೆ ಪ್ರತಿಷ್ಠೆ ಬಹಳ ಹೆಚ್ಚು. ಮಿತ್ರರಿಂದ ಕೆಲ ವಿಷಯಗಳಲ್ಲಿ ಬೇಜಾರ ಬರುವಿಕೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ತೊಂದರೆಯಿಂದ ಯಶಸ್ಸು ಪ್ರವಾಸ ಅನುಕೂಲ. ಆದರೆ ಪತ್ರವ್ಯವಹಾರ ಮತ್ತು ಭೆಟ್ಟಿ ಅದಕ್ಕಿಂತ ಅನುಕೂಲ. ಹಸ್ತಾದ ಕೊನೆಯ ೩ ಮತ್ತು ಚಿತ್ರಾದ ೧ ನೇ ಚರಣಕ್ಕೆ ತೊಂದರೆ ಹೆಚ್ಚು. ತಾ. ೩೦—೧—೫—೬ ಅನುಕೂಲ.

### ತುಲಾ

ಪ್ರಕೃತಿ ಎಲ್ಲರದೂ ಉತ್ತಮ. ಆದರೆ ನಿಮ್ಮನಿಮ್ಮಲ್ಲಿ ಬಹಳ ಕಲಹ. ಏಕತ್ರ ಕುಟುಂಬವಿದ್ದರೆ ವಿಭಕ್ತವಾಗುವ ಸಂಭವ. ಹಾಗಾಗದಿದ್ದರೆ ಅದರ ತಯಾರಿ ನಡೆಯುವದು. ಆಯಾ ಜನರೂ ಅದೇ ರೀತಿ ಕಲಿಸವರು. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಬಹಳ ಕಡಮೆ. ಮತ್ತು ನಿಮ್ಮ ಕೈಯಿಂದಲೆ ಪ್ರತಿಷ್ಠೆ ಮತ್ತು ಪತ್ತು ಕೆಡುವ ವ್ಯವಹಾರ. ಮಿತ್ರತ್ವದಲ್ಲಿ ವಿರೋಧ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ವಿಜಯ ಆದ ಅದಕ್ಕಾಗಿ ಜೊಟ್ಟತನ ಮಾಡಿದ ಲೋಕಾಪವಾದ ಪುಣ್ಯಕೃತ್ಯ ಮಾಡುವ ಅಬ್ಬರ ಆದರೆ ಮನಸಿನಲ್ಲಿ ಪಾಪವಾಸನೆ ಸಾಧಿಸುವ ಆಟ. ಪ್ರವಾಸಾದಿ ಕೆಲಸಗಳು ತೊಂದರೆಯವು. ಸ್ವಾತಿಯ ಕೊನೆಯ ೩ ಮತ್ತು ವಿಶಾಖಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೧—೨—೩ ಅನುಕೂಲ.

### ವೃಶ್ಚಿಕ

ನಿಮ್ಮ ಮತ್ತು ಹೆಂಡತಿಯ ಅದೇ ರೀತಿ ಮಕ್ಕಳ ಪ್ರಕೃತಿಯೂ ಅನುಕೂಲವಿರದೆ ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ಸುಖ ತೊಂದರೆಯದು ಇದ್ದ ಸಂಗ್ರಹದೊಳಗಿಂದ ಇಲ್ಲವೆ ಎರಡನೆಯವರಿಂದ ಕೈಗಡ ಇಸಿಕೊಂಡು ವೆಚ್ಚ ಮಾಡುವ ಪ್ರಸಂಗ. ಪತಿ-ಪತ್ನಿಯರಲ್ಲಿ ಐಕ್ಯ. ಆದರೆ ಇತರರಿಂದ ಬಹಳ ದ್ವೇಷ ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ ಆದರೆ ಅದಕ್ಕಾಗಿ ಅತಿಶಯ ವೆಚ್ಚ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳದೇ ಹೆಚ್ಚು ಜೋರು. ಮಿತ್ರಸುಖ ಉತ್ತಮ ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ ಅನುರಾಧೆಯ ಕೊನೆಯ ೩ ಮತ್ತು ಜೇಷ್ಠಾದ ೧ ನೇ ಚರಣಕ್ಕೆ ಹೆಚ್ಚು ತೊಂದರೆ. ತಾ. ೨-೩-೬ ಉತ್ತಮ.

### ಧನು

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ. ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಕಡಮೆಯೆ. ನೋಕರ ಚಾಕರರು ತಲೆತಿರುಕರಂತೆ ವರ್ತಿಸುವರು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ಅದರ ಭಾವೀ ಸ್ಥೈರ್ಯದ ಬಗ್ಗೆ ಗೂಢ ಚಿಂತೆಯುಂಟಾಗುವ ಸುದ್ದಿ ಕೇಳಬರುವ ಸಂಭವ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಯೋಗ್ಯ ಮಾತಿನಲ್ಲಿ ಮನಸಿನ ಅಸ್ಥಿರತೆ ಕಂಡು ಬರುವದರಿಂದ ಸಮಾಜದಿಂದ ಬಹಳ ಟೀಕೆ. ಪ್ರವಾಸಾದಿ ಕೆಲಸ ಸುಖಕರ ಆದರೆ ಮೂಲಾದ ಕೊನೆಯ ೩ ಮತ್ತು ಪೂರ್ವಾಷಾಢಾದ ೧ ನೇ ಚರಣಕ್ಕೆ ತೊಂದರೆಯಿಂದ ಯಶಸ್ಸು. ತಾ. ೨—೩—೪—೫ ಅನುಕೂಲ.

### ಮಕರ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಆದರೆ ಹೆಂಡತಿ ಮತ್ತು ಮಕ್ಕಳು ಕೆಲ ಸಂಗತಿಗಳನ್ನು ಮನಸಿನ ವಿರುದ್ಧ ಮಾಡಬೇಕಾದ ಸಂಭವ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಮಿತ್ರತ್ವದಲ್ಲಿ ಸ್ವಲ್ಪ ವಿರೋಧ, ಪ್ರವಾಸ ಕೆಲಸ ಬಹಳ ಉತ್ತಮ. ಶ್ರವಣಾದ ಕೊನೆಯ ೩ ಮತ್ತು ಧನಿಷ್ಠೆಯ ೧ ನೇ ಚರಣಕ್ಕೆ ಮಾತ್ರ ತೊಂದರೆಯಿಂದಲೆ ಯಶಸ್ಸು. ತಾ. ೩೦—೧—೫—೬ ಅನುಕೂಲ.

### ಕುಂಭ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಆದರೆ ಮಕ್ಕಳ ವರ್ತನೆ ಚಿಂತೆ ಹುಟ್ಟಿಸುವಷ್ಟು ಕೆಡುವ ಸಂಭವ. ಕ್ಷುಲ್ಲಕ ಮಾತಿನಲ್ಲಿಯೂ ನಿಮ್ಮ ನಿಮ್ಮಲ್ಲಿ ತೀವ್ರ ಮತಭೇದ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಗುಪ್ತ ಇಲ್ಲವೆ ಅಕಲ್ಪಿತ ಲಾಭದ ಬಹಳ ಸಂಭವ. ಮಿತ್ರ ಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಕೆಲವೊಂದು ಗಹನ ಕಾರಸ್ಥಾನದಲ್ಲಿ ಮನಸ್ಸು ಮಗ್ನವಾಗುವದು. ವರಿಷ್ಠ ಇಲ್ಲವೆ ಆಶ್ರಯದಾತರು ನಿಮ್ಮ ನಿಂದೆ ಮಾಡುವರು ಅವರಿಂದ ನಿಜ ಇಲ್ಲವೆ ಸುಳ್ಳು ಆರೋಪ. ಪತ್ರವ್ಯವಹಾರಕ್ಕಿಂತ ಪ್ರವಾಸ ಅನುಕೂಲ ಆದರೆ ಭೆಟ್ಟಿ ತೊಂದರೆಯದು. ಶತತಾರಿಕೆಯ ಕೊನೆಯ ೩ ಮತ್ತು ಪೂರ್ವಾಭಾದ್ರಪದದ ೧ನೇ ಚರಣಕ್ಕೆ ತೊಂದರೆ ಕಡಮೆ. ತಾ. ೩೦, ೧, ೨, ೩ ಅನುಕೂಲ

### ಮೀನ

ಪ್ರಕೃತಿಯಲ್ಲಿ ಕುರುಕುರಿ. ಪತ್ನಿ ಸುಖ ಅನುಕೂಲವಿದ್ದರೂ ಪರಸ್ತ್ರೀ ಬಗ್ಗೆ ಮನಸ್ಸು ಗರ್ಕಾಗುವದು. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಕಡಮೆ. ಆದರೆ ಲಾಭ ಉತ್ತಮ. ಅಲ್ಪ ಸ್ವಲ್ಪ ಅನಪೇಕ್ಷಿತ ಲಾಭದ ಸಂಭವ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ವಿಜಯ. ಬಂಧುವರ್ಗದವರಲ್ಲಿ ಒಬ್ಬರಿಗೆ ಬಹಳ ಕ್ಲೇಶ. ಮಕ್ಕಳಲ್ಲಿ ಒಬ್ಬರ ಬಹಳ ಉನ್ನತಿ. ಭೆಟ್ಟಿ ಮತ್ತು ಪ್ರವಾಸಕ್ಕಿಂತ ಪತ್ರವ್ಯವಹಾರ ಹೆಚ್ಚು ಅನುಕೂಲ. ಉತ್ತರಾಭಾದ್ರಪದೆಯ ಕೊನೆಯ ೩ ಮತ್ತು ರೇವತಿಯ ೧ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೨, ೩, ೪, ೫ ಅನುಕೂಲ.

## ನಾರದ ಕತೆ

(೧೫ನೇ ಪುಟದಿಂದ)

"ಅಹುದು ಅವರೀಗ ಪ್ರಭಾಕರರಾಯರಾಗಿರಬಹುದಲ್ಲವೇ?" ಹಿಂದಿನ ನೆನಪನ್ನು ನೆನೆಸುತ್ತ ಕೇಳಿದಳು.

"ಅಹುದು ಬಹಳ ದೊಡ್ಡವನಿದ್ದನವನು ಅಂತೆಯೇ ಈ ಮೃತ್ಯುಲೋಕದಿಂದ— ಈ ಕಠೋರವಾದ ಜಗತ್ತಿನಿಂದ- ಯಮಲೋಕಕ್ಕೆ ಹೊರಟುಹೋದನು."

ವಸುಂಧರೆಯ ಕಣ್ಣುಗಳಲ್ಲಿ ದುಃಖದ ಬಿಂದು ಪಟಪಟನೆ ಉದುರಲಾರಂಭಿಸಿದವು.

ಮಧುಸೂದನನು ಮುಂದುವರಿಸಿದನು. "ಪ್ರಭಾಕರ ಹೊರಟುಹೋದನು. ಗಿಡ ಮುರಿದು ನೆಲಕ್ಕುರುಳಿತು. ಆ ಗಿಡದ ಆಶ್ರಯ ಹೊಂದಿದ ಬಳ್ಳಿಯೂ ಅದೇ ಹಾದಿ ಹಿಡಿದಿದೆ. ಆದರೆ ಒಂದು ಸಸಿ ಮಾತ್ರ ಉಳಿದಿದೆ ಅದಕ್ಕೂ ಯಾರ ಆಶ್ರಯವೂ ದೊರೆಯದೆ ಹೋದ ಪಕ್ಷದಲ್ಲಿ ಗಿಡಕ್ಕೂ ಆದ ದುರವಸ್ಥೆ ಅದಕ್ಕೂ ಒದಗುವ ಸಂಭವವಿದೆ. ಬಾಡಿ ಹೇಳಹೆಸರಿಲ್ಲದಂತೆ ಆಗುವದು. ವಸುಂಧರೆ ಅದಕ್ಕೆ ನೀರೆರೆದು ಪೋಷಿಸಬಲ್ಲೆಯಾ? ಚಿಕ್ಕ ಸಸಿಯನ್ನು ಗಿಡವನ್ನಾಗಿ ಮಾಡುವ ಹೊಣೆಯನ್ನು ಹೊರಬಲ್ಲೆಯಾ? ಮಲ್ಲಿಗೆಯ ಬಳ್ಳಿ ಬಾಡಿಕೆಂಪು ನಿನ್ನ ಕೋಮಲವಾದ ಹೃದಯ ತಳಮಳಗೊಂಡು ದುಃಖದಿಂದ ಮಿಡಿಯುತ್ತಿದೆ. ಅಂದಮೇಲೆ ಮನೋಹರನಂತಹ ಜೀವಂತ ಸಸಿ ಬಾಡಿಹೋಗುವುದನ್ನು ನಿನ್ನಿಂದ ನೋಡಲಾಗುವುದೇ? ನಿನ್ನ ಹೆಸರು ವಸುಂಧರೆಯಿದೆ. ಹೊಟ್ಟೆಯಲ್ಲಿ ಹುಟ್ಟಿದ ಮಗುವಿನಂತೆ ಅಕ್ಕರತೆಯಿಂದ ಕಾಪಾಡಿದರೆ ಮನೋಹರನು ದೊಡ್ಡವನಾಗುವನು. ಅದರಿಂದ ನೀನೂ ಮಾತೆಯ ನಾಮಾಂಕಿತವನ್ನು ಪಡೆಯುವೆಯಲ್ಲವೇ? ನಾನೂ ನನ್ನ ಗೆಳೆಯನಿಗೆ ಸಹಾಯ ಮಾಡಿದಂತಾಗುವದು. ಇದಕ್ಕೆ ನಿನ್ನ ಸಮ್ಮತಿಯಿದೆಯೇ?"

ದೈನ್ಯದಿಂದ ಅವನು ಕೇಳಿದನು. ವಸುಂಧರೆಯ ಮುಖವರಳಿತು. ಒಪ್ಪಿಗೆಯ ಚಿಹ್ನ ಮುಖದಲ್ಲಿ ಉದ್ಭವಿಸಿತು. ಅವಳು ಮಾತನಾಡುವಷ್ಟರಲ್ಲಿಯೇ ಬಾಗಿಲು ತೆರೆದು ಮನೋಹರನು ಒಳಗೆ ಬಂದನು. ಮುನ್ನಾದಿವವೇ ಅವಳ ತಾಯಿಯು ತೀರಿದ್ದಳು.

"ಡಾಕ್ಟರೆ ಅಮ್ಮ ತೀ-ರಿ-ಕೊಂ-ಡಳು" ಅಳುತ್ತಳುತ್ತ ನಿಶ್ಶಕ್ತನಾದ ಮನೋಹರನು ಅಲ್ಲಿಯೇ ಕುಳಿತುಕೊಂಡನು. ಮಧುಸೂದನ ಹಾಗೂ ವಸುಂಧರೆ ಅವನನ್ನು ಸುತ್ತುಗಟ್ಟಿದರು. ಮೂವರ ಅಶ್ರುಬಿಂದುಗಳು ಕೂಡಿ ತ್ರಿವೇಣಿ ಸಂಗಮವಾಗಿದ್ದಿತಲ್ಲಿ.

"ಡಾಕ್ಟರ, ದುಡಿದು ಕಲಿತರೂ ಚಿಂತೆಯಿಲ್ಲ, ಮುಂದೆ ಬರುವದು ಮಾತ್ರ ಬಿಡಬೇಡ"ವೆಂದು ತಾಯಿಯು ಹೇಳಿದ್ದಾಳೆ. ಕಾರಣ ದುಡಿದು ಓದಿ ಅವಳ ಆಶೆ ಈಡೇರಿಸಬೇಕಾಗಿದೆ. ಅದುದರಿಂದ ನನಗೊಂದು ಕೆಲಸ ಕೊಡಬಲ್ಲಿರಾ?"

ಅವನ ನುಡಿ ಮರುಕದಿಂದ ಕರುಣಾಜನಕವಾಗಿದ್ದಿತು. ಇದು ವರೆಗೆ ಅಡಗಿದ್ದ ರಹಸ್ಯದ ಘಾಟಸ್ಫೋಟವಾಯಿತು. "ಮನೋಹರ ಮಧುಸೂಧನನೆಂಬುವನು ನಾನೇ, ನಿನ್ನ ತಂದೆಯ ಪರಮಮಿತ್ರ,, ನೀನು ನನ್ನ ಮಗನೇ ಆಗಿರುವಿ ಈಗ ಇನ್ನು ಅಳುವ ಕಾರಣವಿಲ್ಲ. ಇದೋ ಈ ಅಳುತ್ತಿರುವ ನಿನ್ನ ಮಾತೆಯನ್ನು ನಗಿಸಿ, ನಲಿದಾಡಿಸಿ. ಆನಂದಲೋಕದಲ್ಲಿ ಒಯ್ಯುವ ಹೊಣೆ ನಿನ್ನದು" ಮಧುಸೂಧನನನ್ನು ವಸುಂಧರೆಯ ಕಡೆಗೆ ನೋಡುತ್ತ ಮನೋಹರನಿಗೆ ಹೇಳಿದನು.

"ವಸು, ಮೊದಲು ಈ ವ್ಯಾಕುಲವಾದ ಸಸಿಗೆ ಶಾಂತಿಯನ್ನುಂಟು ಮಾಡು ನೋಡುವ ನಂತರ ಮಾತನಾಡುತ್ತ ಕುಳಿತುಕೊಳ್ಳೋಣವಂತೆ."

ವಸುಂಧರೆಯೊಡನೆ ಅಡುಗೆಯ ಮನೆಯ ಕಡೆಗೆ ನಡೆದಂತೆ ಸುಖ ದುಃಖದ ಸಮಿಶ್ರತೆಯಿಂದ ಅವನ ಅಂತಃಕರಣವು ತೂಗುಯ್ಯಾಲೆಯಂತೆ ಅತ್ತಿಂದತ್ತ ತೂಗಾಡತೊಡಗಿತು.

ಸಾಯಂಕಾಲದ ಸಮಯ ಮನೋಹರನ ಬೆನ್ನಿನ ಮೇಲೆ ಪ್ರೇಮಪೂರ್ವಕವಾಗಿ ಕೈಯ್ಯಾಡಿಸುತ್ತ ಗ್ಯಾಲರಿಯೊಳಗೆ ಬಾಡಿದ ಮಲ್ಲಿಗೆಯ ಬಳ್ಳಿಯ ಕಡೆಗೆ ನೋಡುತ್ತಿದ್ದಳು ವಸುಂಧರೆ. ಆನಂದ ಲಹರಿ ಅವಳ ರೋಮ ರೋಮಗಳಲ್ಲಿ ಹರಿದಾಡಿ ಪುಳಕಿತಳನ್ನಾಗಿ ಮಾಡಿತವಳನ್ನು. ಎದುರಿನ ಬಾಡಿದ ಮಲ್ಲಿಗೆಯ ಬಳ್ಳಿಯೂ ಸಹ ಆನಂದದಿಂದ ನಲಿದಾಡುತ್ತಿರುವಂತೆ ಭಾಸವಾಯಿತವಳಿಗೆ. ಅದೇ ವೇಳೆಯಲ್ಲಿ ಹೊರಗಿನಿಂದ ಅದೇ ಬಂದ ಮಧುಸೂದನನು ತಾಯಿ ಮಕ್ಕಳ ನಿರ್ವ್ಯಾಜ ಮಮತೆಯ ಮೋಹವನ್ನು ಕಂಡು ತನ್ನ ಜನ್ಮ ಸ್ವಾರ್ಥಕವಾಯಿತೆಂದು ಆನಂದ ಲಹರಿಯಲ್ಲಿ ಅವರಿಬ್ಬರ ಹಿಂದುಗಡೆ ಬಂದು ನಿಂತುಕೊಂಡನು.

## ದೇವನು ಕೊಂಡ

ಬೀದಿಯ ಭಿಕ್ಷುಕ ಬೇಡಿದುದೇನು?
ರೊಟ್ಟಿಯ ತುಣುಕು, ಬಟ್ಟೆಯ ಹರುಕು
ಮನೆಯಜಮಾನಿಯು ನೀಡಿದುದೇನು?
ಬೈಗಳ ಪಾಪ, ಒಡಲಿನ ಕೋಪ
ಹಾದಿಯ ಮೇಲಣ ನಿದ್ದೆಯ ಸುಖವೆ!
ದೇಹವುಡುಗಿತು, ಮೋಹವಡಗಿತು
ಗೇಣು ಜಾಗೆಯಲಿ ಮನವು ತಣಿಯಿತು
ಅಯ್ಯೊ! ತಿರುಕನನು ಜನವು ತುಳಿಯಿತು
ನೋವ ಸಹಿಸದೆಯೆ ನೊಂದ ತಿರುಕನು
ದನಿದೆಗೆದಳುತಲಿ ಜನವ ಕರೆದನು
ಪಕ್ಕದ ಮನೆಯಾ ಸೊಕ್ಕಿದ ಸೆಟ್ಟಿ
ಫಕ್ಕನೆ ಬಿಟ್ಟನು ನಾಯಿಯನಟ್ಟಿ.
ಸೆಟ್ಟಿಯ ಸುಖನಿದ್ರೆಯು ಹಾಳಾಯ್ತು
ಬಟ್ಟೆಬಡವನನು ಕುಟ್ಟಿದುದಾಯ್ತು
"ಕೆಟ್ಟೆನು ಅಯ್ಯೊ!" ಕುಟ್ಟಿದ ಬೊಬ್ಬೆ
ಊರ ಹೊರಗೆ ದೂಡಿದರೊ ದಬ್ಬಿ
ಅಡವಿಯ ಅಲೆದನು ತುಳಿಯುತ ಮುಳ್ಳು
ಕಡುನರಳಿತು ಆ ಬಡವನ ಕರುಳು
ದಾರಿಗಾಣದೆಯೆ ಹಾರಿದ ಹೊಂಡ
ಏರಿದ ಸ್ವರ್ಗಕೆ, ದೇವನು ಕೊಂಡ.

—ಪಿ. ಟಿ. ಕುಲಕರ್ಣಿ